

ಬಾನ್ ಕೊರೆವ ತಲೆಯು ತಣ್ ತಿರುವೇಂಗಡದ ಒಡೆಯ
ಲೋಕವನು ಹೊರೆವ ದಾಮೋದರಾ ಚದುರ
ನನಗೆ ನನ್ನದಕೆ ನಿನತೆಂಬ ಮುದ್ರೆಯನೊತ್ತಿ
ಕೃಪೆಯ ದೇಡುತಲಿಹೆನು ನಿನ್ನ ಮನಸೆಂತು ?

ಪಕ್ಷಿವಾಹನ ಪರಮಪುರುಷ ನೀ ಕೈಹಿಡಿದು
ಹುಟ್ಟು ಕಡಲಾರಿ ಹಿರಿಪದವಿ ಬಂದಿತು ನನಗೆ
ಇರವಿರಿವ ಪಾಪಕಾಂತಾರ ಸುಟ್ಟಿರಲಾಗಿ
ಅರಿವ ಮೃತ ನದಿ ಮುಟ್ಟಿ ಬಾಯ್ ಮುಚ್ಚೆಹುದು

--ನಮ್ಮಾಳ್ವಾರ್ ತಿರುವಾಯ್ಮೊಳಿ.
'ಶ್ರೀನಿವಾಸ'ರ ಅನುವಾದ.



ಸಂದರ್ಶಿಸಿ. ಆನಂದಿಸಿ.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯಗಳು
# ಹೃಷೀಕೇಶ, ನಾರಾಯಣವನಂ.



# ವಾರ್ಷಿಕ ಬ್ರಹ್ಮೋತ್ಸವಗಳು

11--5--95 ರಿಂದ 20--5--95 ವರೆಗೆ

**ಉತ್ಸವ ಕಾರ್ಯಕ್ರಮ**

| ದಿನಾಂಕ | ವಾರ | ಹಗಲು | ರಾತ್ರಿ |
|---|---|---|---|
| 11--5--95 | ಗುರುವಾರ | ---- | ಅಂಕುರಾರ್ಪಣೆ. |
| 12--5--95 | ಶುಕ್ರವಾರ | ಧ್ವಜಾರೋಪಣ | ದೊಡ್ಡ ಶೇಷವಾಹನ. |
| 13--5--95 | ಶನಿವಾರ | ಚಿಕ್ಕ ಶೇಷವಾಹನ. | ಹಂಸವಾಹನ. |
| 14--5--95 | ಭಾನುವಾರ | ಸಿಂಹವಾಹನ | ಮುತ್ತಿನ ಚಪ್ಪರ ವಾಹನ. |
| 15--5--95 | ಸೋಮವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 16--5--95 | ಮಂಗಳವಾರ | ಮೋಹಿನೀ ಅವತಾರ | ಗರುಡವಾಹನ. |
| 17--5--95 | ಬುಧವಾರ | ಹನುಮಂತ ವಾಹನ<br>ಸಂಜೆ -- ವಸಂತೋತ್ಸವ | ಗಜವಾಹನ. |
| 18--5--95 | ಗುರುವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ. |
| 19--5--95 | ಶುಕ್ರವಾರ | ರಥೋತ್ಸವ | ಅಶ್ವವಾಹನ. |
| 20--5--95 | ಶನಿವಾರ | ತೀರ್ಥವಾರಿ | ಧ್ವಜಾವರೋಹಣ. |

ನೀವೂ ಬನ್ನಿ ತಿ. ತಿ. ದೇ. ನಿಮ್ಮವರನ್ನೂ ಕರೆತನ್ನಿ

ಅಥವಾ



ಸಂಪುಟ -- 25 ಏಪ್ರಿಲ್ 1995 ಸಂಚಿಕೆ --11

# ವಿಷಯಸೂಚಿ



ಮುಖ ಚಿತ್ರ: ಶ್ರೀ ಪದ್ಮಾವತೀ ಸಹಿತ ಶ್ರೀ ವೆಂಕಟೇಶ್ವರಸ್ವಾಮಿ.

ಹಿಂಬದಿಯಲ್ಲಿ: ತಿರುಮಲೆಯ ಶಿಲಾತೋರಣ.

ಒಳಗಡೆ: 1) ಹನುಮಂತ ವಾಹನದಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ.

2) ತಿರುಮಲೆಯಲ್ಲಿ ವಸಂತೋತ್ಸವ.


ಗೌರವ ಸಂಪಾದಕರು :

ಶ್ರೀ ಎನ್. ರಮೇಶ್‌ಕುಮಾರ್, ಐ.ಎ.ಎಸ್.,

ಕಾರ್ಯನಿರ್ವಹಣಾಧಿಕಾರಿ,

ತಿ.ತಿ.ದೇ. ತಿರುಪತಿ.

ಸಂಪಾದಕ :

ಎನ್.ಎಸ್. ರಾಮಮೂರ್ತಿ, ಎಂ. ಎ.

ಉಪಸಂಪಾದಕ :

ಬಿ. ಎನ್. ಶ್ರೀನಿವಾಸನ್ ಎಂ. ಎ.,

ಮುದ್ರಣ :

ಪಿ. ಮೋಹನ್ ರಾವ್

ಲೇಖನ/ಜಾಹೀರಾತುಗಳಿಗೆ

ಮಿಕ್ಕವಿವರಗಳಿಗೆ

ಸಂಪಾದಕರು.

ತಿರುಮಲೆ ತಿರುಪತಿ ದೇವಸ್ಥಾನಗಳು,

ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ

ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ

ದೊರೆಯುವುವು.

**ಬಿಡಿ ಪ್ರತಿ ೨--೦೦**

**ವಾರ್ಷಿಕ ಚಂದಾ ೨೪--೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. --ಸಂ||

ಅಥವಾ




ರಾಮೋ ವಿಗ್ರಹವಾನ್‌ಧರ್ಮಃ ಎಂದರು. ಆತ ತನ್ನನ್ನು ತಾನು ದಶರಥನ ಪುತ್ರ ಎಂದೇ ಗುರುತಿಸಿಕೊಂಡರೂ ಸುತ್ತಲವರಿಗೆ ಅವನು ಭಗವಂತ. ಷೋಡಶ ಸದ್ಗುಣಗಳ ಗಣಿ ಎಂದೇ ನಾರದರು ವಾಲ್ಮೀಕಿಗೆ ತಿಳಿಸಿದರು. "ನನ್ನ ದಡಕ್ಕೆ ಬಂದಾಗ ನಿನ್ನನ್ನು ಪಾರುಗಾಣಿಸಿರುವೆ,ನಿನ್ನ ದಡಕ್ಕೆನಾನು ಬಂದಾಗ ಪಾರುಗಾಣಿಸು ಪ್ರಭುವೆ" ಎಂದ ಗುಹ. (ತುಲಸೀದಾಸರ ಹಾಡು). ಪಾರುಗಾಣಿಸುವ ಪರಮಾರ್ಥ ಅವನು ಎಂಬುದೇ ಎಲ್ಲ ಸಂತ, ಕವಿ, ಮುನಿ ಋಷಿಗಳ ಅಭಿಪ್ರಾಯ.

ಶ್ರೀರಾಮ ಕೆಲವು ಆದರ್ಶಗಳನ್ನು ನೀಡಿದ ಈ ಜಗತ್ತಿಗೆ ತನ್ನ ನಡಾವಳಿಯಿಂದ. ಒಂದೇ ಮಾತು, ಒಂದೇ ಬಾಣ, ಒಬ್ಬಳೇ ಹೆಂಡತಿ ಮೊದಲಾಗಿ ಎಂಬುದನ್ನು ಗಮನಿಸಬೇಕು. "ಅಭಯಂ ಸರ್ವ ಭೂತೇಭ್ಯೋ ದದಾಮ್ಯೇತತ್ ವ್ರತಂ ಮಮ". ಇದು ಅವನ ಧ್ಯೇಯ ವಾಕ್ಯ. "ಅಹಂ ತ್ವಾ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ" ಎನ್ನುತ್ತಾನೆ ಭಗವದ್ಗೀತೆಯಲ್ಲಿ ಶ್ರೀಕೃಷ್ಣ. ವಿಭೀಷಣ ಶರಣಾಗತಿಯಲ್ಲಿ ಮನುಷ್ಯ ಮಾತ್ರನೇ ಆದವನೆಂದು ತನ್ನನ್ನು ತಾನು ವಿವರಿಸಿಕೊಳ್ಳುವ ಶ್ರೀರಾಮನ ಮಾತಿಗೂ, ಎಲ್ಲವೂ ನಾನೇ ಎಂದೂ ನಿಮಿತ್ತಮಾತ್ರ ನೀನು ಎಂದೂ ತನ್ನ ನಿಜರೂಪವನ್ನು ವಿವರಿಸುತ್ತ ಪಾರ್ಥನಿಗೆ ತಿಳಿಸುವ ಕೃಷ್ಣನ ಭರವಸೆಯ ಮಾತಿಗೂ ದೂರಾನ್ವಯ ಮಾಡದೆಯೇ ಪರಸ್ಪರ ಸಂಬಂಧವನ್ನು ಕಂಡು ಕೊಳ್ಳಬಹುದು. ಆದ್ದರಿಂದಲೇ ಇವನು ದೇವರಾದಂತೆಯೇ ಅವನೂ ದೈವವೇ ಆಗಿದ್ದಾನೆ. ಡಿ.ವಿ.ಜಿ. ಅವರು ಹೇಳುವಂತೆ ಭಗವದ್ಗೀತೆಯ ಲಕ್ಷಣಗಳು ಲಕ್ಷ್ಯವಾಗಿವೆ ಶ್ರೀರಾಮನಲ್ಲಿ.

ಗೀತಾ ತತ್ವಾವ ದೋಧಾರ್ಥಂ ಶ್ರೀರಾಮ ಚರಿತಂ ಸ್ಮರೇತ್
ಪೂರ್ವಾವತಾರ ಚಾರಿತ್ರ್ಯ ವ್ಯಾಖ್ಯಾ ಕೃಷ್ಣೋಕ್ತಿ ರೇವ ಹಿ

ಮೊದಲು ಭಾವ ನಂತರ ಭಾಷೆ. ಮೊದಲು ಕಾವ್ಯ ನಂತರ ವ್ಯಾಕರಣಗಳಂತೆ ಮೊದಲು ನಡಾವಳಿ ನಂತರ ಸೂತ್ರಾವಳಿ.

ಇಂತಹ ಆದರ್ಶಮೂರ್ತಿಯನ್ನು ನೆನೆದು ನಡೆಯುವುದು ನಮಗೆ ಇಂದಿನ ಜನಕ್ಕೆ,ಯುಗಕ್ಕೆ ಆರೋಗ್ಯಕರ ಎನ್ನುವ ಭಾವನೆ ಬಲ ವಾಗದಿದ್ದಲ್ಲಿ ಬರಿ ಜೀವಿಸುವುದರಲ್ಲಿ ಯಾವ ಸಾರ್ಥಕ್ಯವುಂಟು? ಹೀಗೆ ಯೋಚಿಸಿದಾಗ ಬಗೆ ಹರಿಯುತ್ತದೆ. ರಾಮ ಎನ್ನುವ ಒಬ್ಬ ವ್ಯಕ್ತಿ ಇದ್ದನೇ ಎಂಬ ಪ್ರಶ್ನೆ, ಆ ವ್ಯಕ್ತಿ ತ್ರೇತಾಯುಗದ ಆ ನಿರ್ದಿಷ್ಟ ಕಾಲಾವಧಿಯಲ್ಲಿ ಇದ್ದದ್ದರಿಂದಲೇ ನಮಗೆ ಈ ಆದರ್ಶವೊಂದು ದೊರೆತಿದೆ. ಹಾಗಲ್ಲವಾದರೇನುಂಟು -- ಇಲ್ಲಿ -- ಇಹದ ಪಶುಸಮಾನ ಬಾಳಿನಲ್ಲಿ.

ಶ್ರೀರಾಮಚಂದ್ರ ಮರ್ಯಾದಾ ಪುರುಷೋತ್ತಮ ಎಂದರು. ಆ ಪುರುಷೋತ್ತಮವನ್ನು ಅನುಸರಿಸಲು ಎಲ್ಲರಿಗೂ ಸಾಧ್ಯವೇ ಎಂದು ಮೊದಲಿಗೇ ಸೋಲು ಕಂಡು ಕೈಚೆಲ್ಲಿ ಕೂಡದೇಕಿಲ್ಲ. ಪ್ರಯತ್ನಪಡುವ ಸ್ವಾತಂತ್ರ್ಯ, ಬುದ್ಧಿ, ಎರಡನ್ನೂ ನೀಡಿದ್ದಾನೆ ಸ್ವಾಮಿ. ಆ ಹಾದಿಯಲ್ಲಿ ನಡೆಯುವ ಬುದ್ಧಿ ಸ್ಥಿರತೆಗಳನ್ನು ನೀಡಲೆಂದು ಶ್ರೀರಾಮನವಮಿಯಂದು ಪ್ರಾರ್ಥಿಸಿ ಮುಂದುವರೆಯುವ.

ರಾಮ ನವಮಿಯ ದಿವಸ
ರಾಮನಾಮಾಮೃತವೇ ಪಾನಕ
ಪನಿವಾರ ಕೋಸಂಬರಿ

* * * * *

# ಯುವ ಯುಗಾದಿ

---ಸಾಲೀಮಠ ದೊಡ್ಡಯ್ಯಶಾಸ್ತ್ರಿ.

ಯುಗಾದಿ ವರ್ಷಾರಂಭದ ಹಬ್ಬ. ಕಾಲ, ಮತ, ದೇಶ, ಸಂಪ್ರದಾಯಗಳಿಗೆ ಅನುಗುಣವಾಗಿ ಯುಗಾದಿಯ ಆಚರಣೆಯಲ್ಲಿ ವಿವಿಧತೆಗಳಿವೆ. ಪದ್ಧತಿ ಏನೇ ಇದ್ದರೂ, ಇದು ಸರ್ವರಿಗೂ ದೊಡ್ಡ ಹಬ್ಬ. ವಿಶ್ವದಾದ್ಯಂತ ಆಚರಿಸುವ ಅನೇಕ ಹಿಂದೂ ಹಬ್ಬಗಳಲ್ಲಿ ಇದೂ ಒಂದು.

ಹಿಂದೂ ಪಂಚಾಂಗದ ರೀತ್ಯಾ ನಮ್ಮಲ್ಲಿ ಮೂರು ರೀತಿಯ ವರ್ಷಮಾನಗಳು ಇವೆ -- ಬಾರ್ಹಸ್ಪತ್ಯ ಮಾನ, ಚಾಂದ್ರಮಾನ ಮತ್ತು ಸೌರಮಾನ, ವಿಂಧ್ಯ ಪರ್ವತಕ್ಕೆ ಉತ್ತರದಲ್ಲಿರುವ ಜನರು ಬಾರ್ಹಸ್ಪತ್ಯ ಮಾನವನ್ನು, ದಕ್ಷಿಣಭಾರತದಲ್ಲಿರುವವರು ಚಾಂದ್ರ ಮಾನ -- ಸೌರಮಾನಗಳನ್ನು ಆಚರಿಸುತ್ತಾರೆ. ತಮಿಳುನಾಡಿನಲ್ಲಿ ಸೌರಮಾನ ಹೆಚ್ಚು ಬಳಕೆಯಲ್ಲಿದೆ. ಕರ್ನಾಟಕ ಮತ್ತು ಆಂಧ್ರಪ್ರದೇಶದಲ್ಲಿ ಚಾಂದ್ರಮಾನ ರೂಢಿಯಲ್ಲಿದೆ. ಈ ಬಾರಿ ಚಾಂದ್ರಮಾನದ ಯುವನಾಮಸಂವತ್ಸರದ ಯುಗಾದಿಯನ್ನು, ಸೌರಮಾನ ಯುಗಾದಿಯನ್ನು ಏಪ್ರಿಲ್ ತಿಂಗಳಲ್ಲಿ ಆಚರಿಸಲಾಗುವುದು.

ಕ್ರಿ.ಪೂ. ೨,೦೦೦ ದಷ್ಟು ಹಿಂದೆಯೇ ಮೆಸೊಪೊಟಮಿಯಾದಲ್ಲಿ ಯುಗಾದಿಯ ಆಚರಣೆ ಇತ್ತೆಂದು ತಿಳಿದು ಬಂದಿದೆ. ಬ್ಯಾಬಿಲೋನಿಯಾದಲ್ಲಿ ಮೇಷ ಸಂಕ್ರಾಂತಿ ಸಮಯದ ಅಮಾವಾಸ್ಯೆ ದಿನದಂದು, ಅಸ್ಸಿರಿಯಾದಲ್ಲಿ ತುಲಾಸಂಕ್ರಾಂತಿಯ ಅಮಾವಾಸ್ಯೆಯಂದು ಹೊಸ ವರ್ಷದ ಸಂಕೇತವಾಗಿ ಯುಗಾದಿಯನ್ನು ಆಚರಿಸಲಾಗುತ್ತಿತ್ತು. ಪರ್ಷಿಯನ್ ಮತ್ತು ಈಜಿಪ್ಟಿಯನ್ನರಿಗೆ ತುಲಾಸಂಕ್ರಾಂತಿಯಂದೂ, ಗ್ರೀಕರಿಗೆ ಮಕರ ಸಂಕ್ರಾಂತಿಯಂದೂ ಹೊಸವರ್ಷ ಯುಗಾದಿ ಆರಂಭವಾಗುತ್ತಿದ್ದುದಾಗಿ ತಿಳಿದುಬರುತ್ತದೆ.

ಭಾರತದಲ್ಲಿ ಅನಾದಿಕಾಲದಿಂದಲೂ ಈ ಹಬ್ಬವನ್ನು ಆಚರಿಕೊಂಡು ಬರಲಾಗುತ್ತಿದೆ. ಯುಗಾದಿಯ ವಿಶೇಷತೆಯನ್ನು ಅಥರ್ವವೇದ, ಶತಪಥ ಬ್ರಾಹ್ಮಣ, ಧರ್ಮಸಿಂಧು, ನಿರ್ಧಾರಸಿಂಧು ಮಹಾಭಾರತ ಮುಂತಾದ ಧರ್ಮ ಗ್ರಂಥಗಳಲ್ಲಿ ಕಾಣಬಹುದಾಗಿದೆ.

ಹರ್ಷದಹಬ್ಬ :-- ಯುಗಾದಿಯೂ ದೀಪಾವಳಿಯಂತೆ ತೈಲ ಅಭ್ಯಂಜನಕ್ಕೆ ಮೀಸಲಾದ ಹಬ್ಬ. ಅಂದು ನಸುಕಿನಲ್ಲಿ ಎದ್ದು, ಎಣ್ಣೆ -- ನೀರು ಹಾಕಿಕೊಂಡು, ಹೊಸ ಬಟ್ಟೆಗಳನ್ನು ಕುಟುಂಬದ ಸರ್ವಸದಸ್ಯರೂ ಧರಿಸುವರು. ಅನಂತರ ಮನೆಯಲ್ಲಿ ದೇವರ ಹಾಗೂ ಪಂಚಾಂಗದ ಪೂಜೆ ನಡೆಯುವುದು. ತೀರ್ಥ -- ಪ್ರಸಾದ -- ವಿತರಣೆಯೊಂದಿಗೆ ಬೇವು ಮಿಶ್ರಿತ ಬೆಲ್ಲದ ವಿತರಣೆಯೂ ನಡೆಯುತ್ತದೆ. ಕೆಲವೆಡೆ ಬೇವು-ಬೆಲ್ಲದ ಜೊತೆಗೆ -- ತುಪ್ಪ ಮತ್ತು ಜೀರಿಗೆಯನ್ನು ಬೆರೆಸುವ ವಾಡಿಕೆ ಇದೆ.

ಮಳೆ, ಬೆಳೆ, ಆರೋಗ್ಯ ಆದಾಯ ಖರ್ಚು ಮನಸ್ಸು ಹಾಗೂ ರಾಜ್ಯದ, ಜಗತ್ತಿನ ಶಾಂತಿಯ ಬಗ್ಗೆ ಮತ್ತು ತಮ್ಮ ಗ್ರಹಗತಿಗಳ ಬಗ್ಗೆ ಪಂಚಾಂಗ ಶ್ರವಣದಿಂದ ಅರಿತುಕೊಳ್ಳುವ ವಾಡಿಕೆ ಇದೆ. ಅನಂತರ -- ದೇವಸ್ಥಾನಗಳಿಗೆ ಹೋಗಿ ದೇವರ ದರ್ಶನ ಮಾಡುವುದು, ಮನೆಯ ಹಿರಿಯರಿಂದ ಆಶೀರ್ವಾದ ಪಡೆಯುವುದರೊಂದಿಗೆ ಬಂಧು -- ಮಿತ್ರರಿಗೆ ಶುಭಕೋರುವುದೂ ಈ ಹಬ್ಬದ ಇನ್ನೊಂದು ಮಹತ್ವ.

ರಾಮರಾಜ್ಯದ ಆರಂಭ :-- ರಾವಣನನ್ನು ಕೊಂದು ಅಯೋಧ್ಯೆಗೆ ಹಿಂತಿರುಗಿದ ಶ್ರೀರಾಮನು ಯುಗಾದಿಯಿಂದಲೇ ರಾಜ್ಯವನ್ನು ಆಳಲು ಪ್ರಾರಂಭಿಸಿದಂತೆ ಅಂದು ಅಯೋಧ್ಯೆಯ ನಿವಾಸಿಗಳೂ ರಾಮನ ವಿಜಯಕ್ಕೆ ಕಾರಣರಾದ ಕಪಿಗಳೂ ವಿಜಯಧ್ವಜ ಹಾರಿಸಿ ಸಂತಸಪಟ್ಟರಂತೆ. ಅದರ ಪ್ರತೀಕವಾಗಿ ಇಂದು ಕೆಲವೆಡೆ ದೇವಾಲಯಗಳ, ಮನೆಗಳ ಮೇಲೆ ಧ್ವಜವನ್ನು ಹಾರಿಸುವ ರೂಢಿ ಇದೆ.

ಶಕೆಯ ಪ್ರಾರಂಭ :-- ನರ್ಮದಾ -- ಕಾವೇರಿ ನದಿಗಳ ವಿಸ್ತಾರವಾದ ಭೂಭಾಗವನ್ನು ಶಾಲಿವಾಹನನು ಆಳುತ್ತಿದ್ದ. ಶಕರು ಭಾರತದ ಮೇಲೆ ದಂಡೆತ್ತಿ ಬಂದಾಗ ಶಾಲಿವಾಹನನು ಶಕರನ್ನು ಸೋಲಿಸಿದ. 'ಯುಗಾದಿ'ಯಂದೇ ಶಕರನ್ನು ಯುದ್ಧದಲ್ಲಿ ಸೋಲಿಸಲಾಯಿತೆಂದೂ ಇತಿಹಾಸ ಹೇಳುತ್ತದೆ. ಅಂದಿನಿಂದಲೇ 'ಶಾಲಿವಾಹನ ಶಕೆ' ಪ್ರಾರಂಭವಾಯಿತೆಂದೂ ಹೇಳಲಾಗುತ್ತದೆ.

ಆದಿ ತೀರ್ಥಂಕರನ ಮಗ ಭರತ ಚಕ್ರವರ್ತಿಯು ದಿಗ್ವಿಜಯ ಪಡೆದ ದಿನ ಮತ್ತು ಜೈನ ಸಂಪ್ರದಾಯದ ೧೯ನೇ ತೀರ್ಥಂಕರನಾದ ಮಲ್ಲಿನಾಥನು ಹುಟ್ಟಿದ ದಿನವೂ ಯುಗಾದಿಯೇ. ಆದ್ದರಿಂದಲೇ ಜೈನರಿಗೂ ಯುಗಾದಿಯು ಪವಿತ್ರವಾದ ದಿನವಾಗಿದೆ.

ಚೈತ್ರ ಪಾಡ್ಯದಿಂದ ನವಮಿಯವರೆಗೆ ವಸಂತ ನವರಾತ್ರಿಯನ್ನು ಮತ್ತು ಅಶ್ವಯುಜ ಪಾಡ್ಯದಿಂದ ನವಮಿಯವರೆಗೆ ಶರನ್ನವರಾತ್ರಿಯನ್ನು ಆಚರಿಸುವ ವಾಡಿಕೆ ಸರ್ವತ್ರ ರೂಢಿಯಲ್ಲಿದೆ. ಈ ದಿನಗಳಲ್ಲಿ ಶಕ್ತಿಯ ಉಪಾಸನಾಂಗವಾಗಿ ವಿಶೇಷ ಪೂಜೆ, ಜಪ, ತಪ, ಹೋಮ, ನೇಮಗಳನ್ನು ಆಚರಿಸುವರು. ಇದೇ ಸಂದರ್ಭದಲ್ಲಿ ಶ್ರೀರಾಮನವಮಿ ಉತ್ಸವಗಳನ್ನು ಸಾರ್ವಜನಿಕವಾಗಿ ಆಚರಿಸುವ ಬಳಕೆಯೂ ಭಾರತಾದ್ಯಂತ ಇದೆ.

ವಸಂತ ಋತುವಿನ ಆರಂಭದಲ್ಲೇ ಯುಗಾದಿ ಆಚರಿಸಲಾಗುತ್ತದೆ. ಆದ್ದರಿಂದಲೇ ಗೀತಾಚಾರ್ಯನು ಭಗವದ್ಗೀತೆಯಲ್ಲಿ "ಋತೂನಾಂ ಕುಸುಮಾಕರಃ " ಋತುಗಳಲ್ಲಿ ನಾನು ವಸಂತ ಋತು ಎಂದು ಹೇಳಿದ್ದಾನೆ.

ಯುಗಾದಿಯ ಆಚರಣೆಯ ಉದ್ದೇಶಗಳು ಅನೇಕವಿದ್ದರೂ ಮುಖ್ಯವಾಗಿ ಅದು ಜೀವನದ ಪುನರ್ ಚೈತನ್ಯಕ್ಕೆ ಸಂಬಂಧಿಸಿದ್ದು, ಮನಸ್ಸಿನ ಹಳತನ್ನು ಕಳಚಿಹಾಕಿ, ಹೊಸದಾದ ಧ್ಯೇಯ, ಆಸೆಗಳನ್ನು ಸ್ವೀಕರಿಸಲು ಸಂಕಲ್ಪಮಾಡುವದಿನ 'ಯುಗಾದಿ' ಎನ್ನುವುದರಲ್ಲಿ ಅತಿಶಯೋಕ್ತಿ ಇಲ್ಲ. ●

**ಸಪ್ತಗಿರಿ**

ವಾಚಕರಿಗೆ, ಏಜಂಟರಿಗೆ,

ಯುವ ನಾಮ ಸಂವತ್ಸರದ

ಹಾರ್ದಿಕ ಶುಭಾಶಯಗಳು.

--ಸಂಪಾದಕ, ಸಪ್ತಗಿರಿ.

# ವಸಂತ ಪಂಚಮಿ

---ಅನಂತ ಚಿಂತಾಮಣಿ ಜ್ಯೋತಿಷೀ.

ಮಾಘಶುದ್ಧ ಪಂಚಮಿಯನ್ನು ವಸಂತ ಪಂಚಮಿ, ಭಾರತೀ ಪಂಚಮಿ ಎಂದು ಕರೆಯುವರು. ಅಂದು ರತಿ ಕಾಮರ ಪೂಜೆಯಾಗಿದ್ದರಿಂದ ವಸಂತ ಪಂಚಮಿಯಾಗಿದೆ. ಈ ದಿವಸ ಸರಸ್ವತಿ ಹಾಗೂ ವೇದಸಾಹಿತ್ಯವನ್ನು ಪೂಜಿಸುತ್ತಿದ್ದು ಇದನ್ನು ಭಾರತೀ ಪಂಚಮಿಯೆಂದು ಕರೆಯುವರು. ಹೇಮಾದ್ರಿಯಲ್ಲಿ -- ಮಾಘೇ ಮಾಸಿ ಸಿತೇ ಪಕ್ಷೇ ಪಂಚಮ್ಯಾಂ ಪೂಜಯೇದ್ಧರಿಮ್ --ಎಂದು ಹೇಳಿದ್ದು ವಿಷ್ಣುವಿನ ಪೂಜೆ ಹೇಳಲ್ಪಟ್ಟಿದೆ.

ಮಾಘ ಮಾಸವು ಶಿಶಿರ ಋತುವಿನಲ್ಲಿ ಬಂದರೂ ಕೂಡ ಪಂಚವಸಂತ ವಿಲಾಸಗಳಲ್ಲಿ ಪ್ರಥಮದ್ದಾಗಿದೆ. ವಸಂತಾರಂಭದ ಕಾರಣವು ಇಂತಿದೆ -- ಪ್ರತಿಯೊಂದು ಋತುವಿಗೆ ೪೦ ದಿನಗಳು ಗರ್ಭಕಾಲವಾಗಿದೆ. ಚಾಂದ್ರಮಾಸದ ಲೆಕ್ಕದಿಂದ ವಸಂತಾರಂಭದ ದಿನ ಅಂದರೆ ಫಾಲ್ಗುಣ ಕೃಷ್ಣ ಪ್ರತಿಪದೆಗಿಂತ ೪೦ ದಿನ ಮೊದಲು ಅಂದರೆ ಮಾಘ ಶುದ್ಧ ಪಂಚಮಿ ವಸಂತಾರಂಭದ ದಿನವೆಂದಾಯಿತು. ಚೈತ್ರದಲ್ಲಿ ವಸಂತಋತು ಪ್ರಾರಂಭವಾದರೂ ಕೂಡ ಫಾಲ್ಗುಣ ಕೃಷ್ಣ, ಪ್ರತಿಪದೆಯಿಂದ ವಸಂತೋತ್ಸವ ಆರಂಭವಾಗುತ್ತದೆ. ವಸಂತ ಪಂಚಮಿಯ ಹೊತ್ತಿಗೆ ವಸಂತನ ಕುಸುಮಾಕರತ್ವವು ಆರಂಭವಾಗುತ್ತದೆ.

ವಸಂತ ಋತುವಿನಲ್ಲಿ ಪ್ರಕೃತಿಯು ಪ್ರಮುದಿತಗೊಂಡು ಎಲ್ಲ ವೃಕ್ಷಗಳಲ್ಲಿ ಪತ್ರಪುಷ್ಪಗಳು ಬರುತ್ತವೆ. ಹಳೆಯ ವಸ್ತುಗಳು ಹೊಸದಾಗಿ ರೂಪಾಂತರಗೊಳ್ಳುತ್ತವೆ. ಹೆಚ್ಚು ಶೀತ ಹೆಚ್ಚು ಉಷ್ಣವಿಲ್ಲದೆ ಇದ್ದು ಸ್ಪಷ್ಟಗೊಂಡಿರುತ್ತದೆ. ವಸಂತದಲ್ಲಿ ಶೀತ ಕಾಲದ ಕಫವು ಸೂರ್ಯಕಿರಣಗಳಿಂದ ಪ್ರೇರಿತಗೊಂಡು ಅಗ್ನಿಯನ್ನು ಬಾಧಿಸುತ್ತದೆ. ಮತ್ತು ಅನೇಕ ರೋಗಗಳನ್ನು ಅದು ಹುಟ್ಟಿಸುತ್ತದೆ. ಕಫವನ್ನು ನಿವೃತ್ತಿಗೊಳಿಸಲು ಹೆಚ್ಚು ಮಾತಾಡುವಿಕೆ -- ಹಾಡುವಿಕೆಯು ಉತ್ತಮ ಮದ್ದು ಎನಿಸಿದೆ. ಹೀಗಾಗಿ. ವಸಂತೋತ್ಸವ ಆಚರಣೆಯು ಆರೋಗ್ಯದಾಯಕವಾಗಿರುತ್ತದೆ.

ವಸಂತಋತುವು ಮದನೋದ್ದೀಪಕವಾಗಿದೆ. ಈ ಋತುವಿನಲ್ಲಿ ಸ್ತ್ರೀಯರಿಗೆ ಹಾಗೂ ವನಕ್ಕೆ ಆಯುರ್ವೇದವು ಯೌವನವನ್ನು ಸೇವಿಸಲು ಆಜ್ಞೆ ಕೊಟ್ಟಿದೆ. ಕಾಮ -- ರತಿಯರು ಸೇವನೆಯ ಅಧಿದೇವತೆಯರು. ಈ ಉತ್ಸವದಲ್ಲಿ ಕಾಮ ರತಿಯರನ್ನು ಪ್ರಧಾನರೂಪದಿಂದ ಅರ್ಚಿಸಲಾಗುವುದು. ವಸಂತೋತ್ಸವದ ಆಚರಣೆ ಶ್ರೀ ಹರ್ಷನ ರತ್ನಾವಲಿ ನಾಟಕದಲ್ಲಿ ಸುಂದರವಾಗಿ ವರ್ಣಿತವಾಗಿದೆ.

ವೇದಾಧ್ಯಯನದ ಆರಂಭಕ್ಕೆ ಇಂದು ಪ್ರಶಸ್ತ ಸಮಯವಾಗಿದೆ. ಶಾರದೆ -- ವೇದ -- ವೈದಿಕರ ಪೂಜೆ ಅಂದು ನಡೆಯುತ್ತದೆ.

ಜಗತ್ತಿನ ಪಾಲನಕರ್ತ ಭಗವಾನ್ ವಿಷ್ಣು ಮತ್ತು ಪರಬ್ರಹ್ಮನ ಪೂರ್ಣಾವತಾರ ಆನಂದಮೂರ್ತಿ ಭಗವಾನ್ ಕೃಷ್ಣನು ಈ ಉತ್ಸವದ ಅಧಿದೇವತೆಯಾಗಿದ್ದು ಅಂದು ಪೂಜಿಸುವರು.

ವ್ರತಾರ್ಕದಲ್ಲಿಯ ವಿಷ್ಣು ಧರ್ಮೋತ್ತರದ ಕಥೆಯು ಭಾರತೀಯ ವ್ರತೋತ್ಸವದಲ್ಲಿ ವಸಂತ ಪಂಚಮಿಯ ಕಥೆಯು ಇಂತಿದೆ. ವಸಂತಪಂಚಮಿ ವ್ರತದ ವಿವರವನ್ನು ವಶಿಷ್ಠರು ರಾಜಾ ಅಂಬರೀಷನಿಗೆ ತಿಳಿಸುತ್ತ ಈ ರೀತಿ ಹೇಳಿದರು. ವಸಂತ ಪಂಚಮಿಯು ಎಲ್ಲ ಪಾಪಗಳ ನಾಶಕವಾಗಿದೆ. ಅಂದು ಮುಂಜಾನೆ ಸ್ನಾನಾದಿ ಮೂಲಕ ಪವಿತ್ರರಾಗಿ ಭಕ್ತಿಯುತವಾಗಿದ್ದು ಶ್ರೀಕೃಷ್ಣಮಂದಿರವನ್ನು ಸುಂದರವಾಗಿ ಸಚ್ಛಗೊಳಿಸುವರು. ರೇಶಿಮೆ ವಸ್ತ್ರ ಹಾಗೂ ಮುಕ್ತಾಫಲ ಮತ್ತು ಅನೇಕ ಬಗೆಗಳ ಸುಂದರ ಪತ್ರ ಪುಷ್ಪ ಪಲ್ಲವಗಳಿಂದ ಮಂಡಪವನ್ನು ಶೃಂಗಾರಗೊಳಿಸಬೇಕು. ರೇಶಿಮೆ ವಸ್ತ್ರದಿಂದ ಆಚ್ಛಾದಿತಗೊಂಡ ದೊಡ್ಡ ಸಿಂಹಾಸನದ ಮೇಲೆ ಶ್ರೀಕೃಷ್ಣನನ್ನು ವಿರಾಜಮಾನಗೊಳಿಸಿ ನಾನಾ ತರಹ ಭೂಷಣಗಳಿಂದ ಅಲಂಕರಿಸಬೇಕು. ಗೋವಿಂದನ ಮುಂದೆ ಗೀತ ನೃತ್ಯವಾದ್ಯ ಮೃದಂಗ ಶಬ್ದಗಳಿಂದ ಸಂಪನ್ನಗೊಳಿಸಬೇಕು. ವೇದಪಂಡಿತರಾದ ಬ್ರಾಹ್ಮಣರಿಂದ ವಸಂತೋತ್ಸವದ ಕಥೆಯನ್ನು ಕೇಳಿ ವ್ಯಾಸ ಪೂಜೆ ಮಾಡಿ ದಕ್ಷಿಣಾ ಸಂಭಾವನೆಯನ್ನಿತ್ತು ವೈಷ್ಣವಪೂಜೆ ಮಾಡತಕ್ಕದ್ದು. ಈ ಪ್ರಕಾರ ವಸಂತೋತ್ಸವ ಮಾಡುವುದರಿಂದ ಸುಖ ಧನ ಧಾನ್ಯ ಲಭಿಸಿ ಆಯುಸ್ಸು ಆರೋಗ್ಯ ಸಿರಿ ವಿದ್ಯಾಬುದ್ಧಿ ಪ್ರಾಪ್ತವಾಗುತ್ತವೆ.

ಮಹಾಭಾಗ ರಾಜಾ ಅಂಬರೀಷನು ಮುನಿಶ್ರೇಷ್ಠ ವಶಿಷ್ಠರಿಂದ ವಸಂತೋತ್ಸವವನ್ನು ಕೇಳಿ ವಿಧಿಪೂರ್ವಕವಾಗಿ ಆಚರಿಸಿದಾಗ ಸಫಲತೆಯು ಪ್ರಾಪ್ತವಾಯಿತು. ವಸಂತ ಪಂಚಮಿಯಿಂದ ಹರಿಶಯಿನಿ ಏಕಾದಶಿ ತನಕ ವಸಂತರಾಗ ಹಾಡಬೇಕಾಗಿದೆ. ಹೀಗೆ ಮಾಘಮಾಸ ಶುಕ್ಲಪಕ್ಷದ ಪಂಚಮಿ ದಿವಸ ಭಕ್ತಿವಂತರಾಗಿ ಶ್ರೀಕೃಷ್ಣ ಪ್ರೀತಿದಾಯಕ ವಸಂತೋತ್ಸವ ಮಾಡಬೇಕೆಂದು ಪುರಾಣವಚನವಿದೆ.



ಚರಿತಂ ರಘೂನಾಥಸ್ಯ
ಶತಕೋಟಿ ಪ್ರವಿಸ್ತರಮ್
ಏಕೈಕ ಮಕ್ಷರಂ ಪ್ರೋಕ್ತಂ
ಮಹಾಪಾತಕನಾಶನಂ
ರಾಮಾಯ ರಾಮಭದ್ರಾಯ
ರಾಮಚಂದ್ರಾಯ ವೇಧಸೇ
ರಘುನಾಥಾಯ ನಾಥಾಯ
ಸೀತಾಯಾಃ ಪತಯೇ ನಮಃ

# ಶ್ರೀರಾಮ ಜನನಂ

---ಡಿ. ರಾಮಕೃಷ್ಣರಾವ್.

ಅಖಿಲ ಲೋಕೈಕ ಶರಣ್ಯನಾದ ಶ್ರೀಮನ್ನಾರಾಯಣನಿಗೆ ಅತ್ಯಂತ ಪ್ರಿಯವಾದಂತಹ ಚತುಸ್ಸಮುದ್ರದ ಮಧ್ಯೆ ನೆಲಸಿರುವ ಭರತಖಂಡದಲ್ಲಿ ಸಕಲ ಸಂಪದ್ಭರಿತವಾದ ಕೋಸಲದೇಶಕ್ಕೆ ರಾಜಧಾನಿಯಾಗಿತ್ತು ಅಯೋಧ್ಯಾ ಪಟ್ಟಣ. ಆ ಪಟ್ಟಣವು ಧರಣಿ ದೇವತೆಯ ಮುಖ ಕಮಲವೋ, ಆ ಮುಖ ಕಮಲದಲ್ಲಿ ಧಾರಣೆ ಮಾಡಿದ ತಿಲಕವೋ ತದ್ವಕ್ಷ ಸ್ಥಲ ಸ್ಥಿತ ಮಂಗಳ ಸೂತ್ರವೋ, ಮುಕ್ತಾಹಾರವೋ, ಪದ್ಮಾಲಯಾಲಯವೆಂಬ ಸುವರ್ಣ ಕಮಲವೋ, ಪ್ರಳಯಾಕಾಲದಲ್ಲಿ ಸಮಸ್ತ ಜೀವಕೋಟಿ ಬಂದುನೆಲಸಲು ಸುಂದರಮಂದಿರವೋ ಎನ್ನುವಂತೆ ಮಹಾ ಮಹಿಮೋನ್ನತಿಯಿಂದಲೂ, ಮಹಾ ವಿಸ್ತೀರ್ಣದಿಂದಲೂ, ದೃಢತಮವಾದ ದುರ್ಗಗಳಿಂದ ಕೂಡಿ ಪಾತಾಳ ಲೋಕ ಪರ್ಯಂತ ವ್ಯಾಪಿಸಿಕೊಂಡು ಆಗಾಧವಾಗಿ ನೆಲಸಿತ್ತು. ಆ ನಗರದಲ್ಲಿ ಸಕಲ ವೇದಗಳನ್ನು ಪುರಾಣೇತಿಹಾಸಗಳನ್ನು ಅಭ್ಯಸಿಸ ತಕ್ಕ ಬ್ರಾಹ್ಮಣರಿಂದ ಶೋಭಿಸಲ್ಪಟ್ಟ ಬೀದಿಗಳು, ವಿಚಿತ್ರಕರವಾದ ರಾಜ ಬೀದಿಗಳು, ಸಕಲವಸ್ತು ಸಮೃದ್ಧಿ ಭರಿತವಾದ ವಣಿಕ ಬೀದಿಗಳು, ಕುಬೇರನನ್ನು ತಿರಸ್ಕರಿಸತಕ್ಕಂಥ ಧನ ಸಂಪನ್ಮೂಲಗಳಿಂದ ಕೂಡಿದ ವೈಶ್ಯಬೀದಿಗಳು, ಸಮಸ್ತ ಸಂಪನ್ಮೂಲವಾದ ಶೂದ್ರ ಬೀದಿಗಳು ಮತ್ತು ಅಲ್ಲಿ ವಿದ್ಯಾ ಶಾಲೆಗಳು, ಗಜಶಾಲೆ, ಅಶ್ವಶಾಲೆ, ನಾಟಕಶಾಲೆ ಮುಂತಾದ ಅನೇಕ ಶಾಲೆಗಳಿಂದ ಕೂಡಿತ್ತು. ಮತ್ತು ಬ್ರಹ್ಮದೇವರ ನಾಲಕ್ಕು ಮುಖಗಳಿಂದ ಹೊರಬಂದವೋ ಎಂಬಂತೆ ಅಲ್ಲಿನ ವಿಪ್ರರು ನಾಲಕ್ಕು ವೇದಗಳನ್ನು ಪಾರಾಯಣ ಮಾಡುತ್ತಿದ್ದರು. ಇಂದ್ರನ ರಾಜಧಾನಿಯಾದ ಅಮರಾವತಿ ಪಟ್ಟಣವನ್ನು, ಕುಬೇರನ ವಾಸಸ್ಥಾನವಾದ ಅಲಕಾಪುರಿ ಸಹಿತ ಅಯೋಧ್ಯಾನಗರಕ್ಕೆ ಸರಿಸಮನಾಗಲಾರದೋ ಎಂಬಂತೆ ಇತ್ತು. ಅಲ್ಲಿನ ಉಳಿದ ಪಟ್ಟಣಗಳ ಸೊಬಗನ್ನು ಬಣ್ಣಿಸಲು ಸಾಧ್ಯವೇ! ಇದಲ್ಲದೆ ಅಲ್ಲಿ ಸುಂದರವಾಗಿ ಅಲಂಕರಿಸಲ್ಪಟ್ಟ ಮಂದಿರಗಳು, ಶೃಂಗಾರ ವನಗಳು, ಕಿವಿಗಳಿಗೆ ಇಂಪಾದ ಸಂಗೀತ, ಭೇರಿ ಝುಂಕಾರಾದಿ ವಾದ್ಯಧ್ವನಿಗಳು ಮುಂತಾದವುಗಳನ್ನು ನೋಡಲು, ಕೇಳಲು ನೋಡಬಯಸುವವರ ನೇತ್ರಗಳಿಗೆ ಆನಂದದಾಯಕವಾಗಿತ್ತು. ಜಗದ್ರಕ್ಷಕನು ಮತ್ತು ಆಶ್ರಿತರಕ್ಷಕನಾದ ನಾರಾಯಣ ಮೂರ್ತಿಯೇ ದುಷ್ಟನಿಗ್ರಹ ಶಿಷ್ಟಪರಿಪಾಲನಾರ್ಥವಾಗಿ ಶ್ರೀರಾಮಚಂದ್ರ ಮೂರ್ತಿಯೂ ಅಂತೆಯೇ ಲೋಕಮಾತೆ ಮಹಾಲಕ್ಷ್ಮಿಯೂ ವಿಷ್ಣುವಕ್ಷಸ್ಥಲಸ್ಥಿತಳೂ ಆದ ಶ್ರೀದೇವಿಯೇ ಸೀತಾದೇವಿಯ ಹಾಗೂ ಅವತರಿಸಿ ನಿವಸಿಸಲು ಬಂದ ಆ ಪವಿತ್ರವಾದ ಸಾಕೇತಪುರವನ್ನು ವರ್ಣಿಸಲು ನಾಲಕ್ಕು ನಾಲಿಗೆಗಳೇನು -- ಸಾವಿರ ನಾಲಿಗೆಗಳುಳ್ಳವರಿಗೂ ಸಹ ಸಾಧ್ಯವೇ ! ಅಂತಹ ಸರ್ವಾಂಗ ಸುಂದರವಾದಂತ ಪಟ್ಟಣವು ತ್ರಿಲೋಕಗಳಲ್ಲಿರತಕ್ಕ ನಗರಗಳಿಗೆ ನಾಯಕ ಮಣಿಯಂತೆ ಪ್ರಕಾಶಮಾನವಾಗಿತ್ತು. ಅಂತಹಾ ಸಾ ಕೇತಪುರದಲ್ಲಿ ಸಮಸ್ತ ದೇವತೆಗಳು, ಋಷಿಗಳು, ಭಕ್ತಿಪಾರಾಯಣರು, ಪರಮತತ್ವಜ್ಞಾನಿಗಳು ಬಂದು ಸ್ನಾನಮಾಡಲು ಸಕಲ ಕಲ್ಮಷಗಳಿಂದ ತೆರವಾಗಿದ್ದ ಸರಯೂ ನದೀತೀರದಲ್ಲಿ ನಲಿದಾಡುತ್ತಿದ್ದರು.

## ದಶರಥನ ಪ್ರಜಾಪಾಲನೆ

ಆ ನಗರವನ್ನು ಸೂರ್ಯವಂಶೀಯರಾದ, ಮನು, ಇಕ್ಷ್ವಾಕು, ಸಗರ, ರಘು ಮುಂತಾದ ಮಹಾ ರಾಜರುಗಳು ಪಾರಂಪರ್ಯವಾಗಿ ರಾಜ್ಯವಾಳುತ್ತ ಬಂದರು. ಅಂತಹ ರಾಜರುಗಳಲ್ಲಿ ಮಹಾಧರ್ಮಾತ್ಮನು, ಸತ್ಯಪರಾಕ್ರಮವಂತನೂ, ಆದಂತಹ ಮಹಾರಾಜನೊಬ್ಬನಿದ್ದ. ಆತನಿಗೆ ಒಬ್ಬ ಮಗನಿದ್ದ. ಆತನು ಈ ಭೂಮಂಡಲವನ್ನೆಲ್ಲ ಏಕಚಕ್ರಾಧಿಪತಿಯಾಗಿ ರಾಜ್ಯವಾಳುತ್ತಿದ್ದ. ಆತನು ಸತ್ಯಧರ್ಮಪರಾಯಣನು, ಯಶೋವಂತ ಮತ್ತು ಭುಜಭಲ ಪರಾಕ್ರಮಶಾಲಿ, ಆಶ್ರಿತ ರಕ್ಷಕನು ನೀತಿಶಾಸ್ತ್ರದ ರೀತಿ ರಾಜ್ಯವನ್ನೂ ಪರಿಪಾಲಿಸುವ ಪ್ರಜ್ಞಾವಂತ. ಎಲ್ಲ ಕಾಲಗಳಲ್ಲೂ ಪ್ರಜೆಗಳ ಕ್ಷೇಮವನ್ನೇ ಬಯಸುವವ, ಧರ್ಮಶಾಸ್ತ್ರರೀತ್ಯ ಆರರ ಒಂದು ಭಾಗವನ್ನು ಕಪ್ಪವಾಗಿ ಪ್ರಜೆಗಳಿಂದ ವಸೂಲಿ ಮಾಡಕೊಳ್ಳುತ್ತಿದ್ದ. ಆತನ ಬುದ್ಧಿ ಎಲ್ಲಾ ಕಾಲಗಳಲ್ಲೂ ಸತ್ಯಾಸತ್ಯಗಳು, ಧರ್ಮಾಧರ್ಮಗಳನ್ನು ಯೋಚಿಸುತ್ತಿದ್ದಿತು. ಆತನಿಂದ ಪರಿಪಾಲಿತವಾದಂತಹ ಆ ದೇಶದಲ್ಲಿ ಈತಿಬಾಧೆಗಳು, ದುರ್ಭಿಕ್ಷ, ಅಕಾಲಮರಣ ಮುಂತಾದವು ಸಂಭವಿಸುತ್ತಿರಲಿಲ್ಲ. ಇಂತಹ ವೈಭವೋಪೇತ ರಾಜನ ಹೆಸರು ದಶರಥ. ಆತನ ರಾಜ್ಯದಲ್ಲಿ ಶತ್ರುಗಳಾಗಲಿ, ದುಷ್ಟರಾಗಲಿ, ಅಧಾರ್ಮಿಕರಾಗಲಿ, ವಿದ್ಯಾವಿಹೀನರಾಗಲಿ ಇರಲಿಲ್ಲ. ಸ್ವಭಾವವಿರೋಧಿಗಳಾ



ದುಂತ ಸಿಂಹಗಳು -- ಆನೆಗಳು, ಹುಲಿಗಳು--ಹಸುಗಳು, ಬೆಕ್ಕುಗಳು--ಇಲಿಗಳು, ಹಾವುಗಳು--ಮುಂಗುಸಿಗಳು ಮುಂತಾದ ಜಂತುಗಳು ಕೂಡ ಅದರ ವರ ವೈರತ್ವವನ್ನು ತೋರ್ಪಡಿಸದೆ ಎಲ್ಲಾ ಜಂತುವರ್ಗವೆಲ್ಲಾ ಐಕಮತ್ಯ ಸ್ನೇಹಭಾವದಿಂದಿತ್ತು. ಸಕಾಲದಲ್ಲಿ ಮಳೆಗಳು ಬಿದ್ದು ಎಲ್ಲ ಕಡೇ ವ್ಯಾಪಿಸಿರುವ ಬೆಳೆಯು ಸಂಮೃದ್ಧಿಯಿಂದ ಕೂಡಿತ್ತು.

ಈ ಮಹೀಪಾಲನ ರಾಜ್ಯದಲ್ಲಿ ಬ್ರಾಹ್ಮಣೋತ್ತಮರು ಸದಾ ವೇದವೇದಾಂಗಗಳನ್ನು, ಶಿಷ್ಯರಿಗೆ ಬೋಧಿಸುತ್ತಲೂ ಅತ್ಯುತ್ತಮವಾದ ಯಜ್ಞಕರ್ಮಗಳನ್ನು ಮಾಡುತ್ತಲೂ ಮಾಡಿಸುತ್ತಲೂ ಷಟ್ಕರ್ಮನಿರತರಾಗಿ, ಧರ್ಮಶಾಸ್ತ್ರವೇತ್ತರಾಗಿ, ತಪೋನಿಷ್ಠರಾಗಿ, ಸಕಲ ವಿದ್ಯಾಪಾರಂಗತರಾಗಿದ್ದರು. ಹಾಗೂ ಬ್ರಾಹ್ಮಣೋತ್ತಮರು ನಿರಂತರವಾಗಿ ಆಚಾರ ನಿರತರಾಗಿದ್ದರು. ಕ್ಷತ್ರಿಯರು ಆ ದಶರಥನ ಸತ್ಯಧರ್ಮಪಾರಾಯಣತ್ವವನ್ನು ಕೀರ್ತಿಪ್ರತಾಪಗಳನ್ನು ತಿಳಿದು ಆತನಿಗೆ ಭಯಪಟ್ಟು ಸಾಮಂತರಾಜರಾಗಿ ಕಪ್ಪವನ್ನು ಸಲ್ಲಿಸಿ ಧರ್ಮಮಾರ್ಗದಲ್ಲಿ ಪ್ರಜೆಗಳನ್ನು ರಕ್ಷಿಸುತ್ತಿದ್ದರು. ವೈಶ್ಯರಾದರೋ ಬಹಳ ದನವಂತರಾಗಿ ದುರಾಕ್ರಮಕ್ಕೆ ಹೋಗದೆ, ಬಂದ ಲಾಭದಲ್ಲಿ ಸಂತೃಪ್ತರಾಗಿದ್ದರು. ಶೂದ್ರರಾದರೋ ಮೇಲಿನ ಜನಾಂಗಕ್ಕೆ ಶುಶ್ರೂಷೆಮಾಡುತ್ತಲು, ಸಂತುಷ್ಟರಾಗಿ ತಮ್ಮ ಕುಲಾಚಾರಗಳಿಗೆ ತಕ್ಕಂತೆ ಕಸುಬುಗಳನ್ನು ಮಾಡುತ್ತಲಿದ್ದರು.

ಇಂತಹ ಮಹಾತ್ಮನಾದಂತಹ ರಾಜನಿಗೆ ಕಾರ್ಯನಿಪುಣರಾದಂತಹ ಮಂತ್ರಾಲೋಚನೆಯಲ್ಲಿ ರಾಜನಿಗೆ ಹಿತವನ್ನು ಬೋಧಿಸುವ ಮಂತ್ರವಲಯದಲ್ಲಿ ಸಕಲ ಸದ್ಗುಣ ಸಂಪನ್ನತೆ ಹೊಂದಿದ ಪ್ರಾಜ್ಞರಾದ ನೀತಿಶಾಸ್ತ್ರವೇತ್ತರಾದಂತಹ ಮಂತ್ರಿಗಳಿದ್ದರು. ಅವರಲ್ಲಿ ಮುಖ್ಯರಾದವರು-- ಸುಮಂತ್ರವರೇಣ್ಯರು. ಇದಲ್ಲದೆ ಮಹಾರಾಜನಿಗೆ ವಸಿಷ್ಠ ಮತ್ತು ವಾಮದೇವರೆಂಬ ಇಬ್ಬರು ಋಷಿಪುಂಗವರು ಪುರೋಹಿತಪ್ರಧಾನರಾಗಿದ್ದರು. ಇವರು ಸಕಲ ವಿದ್ಯಾಪಾರಂಗತರು. ಬ್ರಹ್ಮನಿಷ್ಠಾಪರರು, ಶಮದಮಾದಿ ಸಾತ್ವಿಕ ಗುಣಗಳುಳ್ಳವರು. ವಿನಯ ಸಂಪನ್ನರು ಮತ್ತು ಬುದ್ಧಿವಂತರು, ಜಿತೇಂದ್ರಿಯರು, ನೀತಿ ಶಾಸ್ತ್ರಜ್ಞರು, ಲಕ್ಷ್ಮೀ ಸಂಪನ್ನರು. ಮಂತ್ರಾಲೋಚನೆಯಲ್ಲಿ ಕೀರ್ತಿ ಹೊಂದಿದವರು. ಎಲ್ಲಾ ವಿಷಯಗಳನ್ನು ಬಹಳ ಎಚ್ಚರದಿಂದ ಮಾಡುವವರು. ಇವರ ಮಹಿಮೆ ಅಪಾರವಾದದ್ದು. ಇಂತಹ ಗುಣ ಸಂಪನ್ನರಾದಂತ ಮಂತ್ರಿಗಳೊಂದಿಗೂ, ಪ್ರದಾನಿಗಳೊಂದಿಗೂ, ಪುರೋಹಿತರೊಂದಿಗೂ ಕೂಡಿ ಸ್ವಲ್ಪವೂ ಚಿಂತೆಗೊಳ್ಳದೆ, ಆತ ಚಾರರೊಂದಿಗೆ ಸಕಲ ದೇಶ ವೃತ್ತಾಂತಗಳನ್ನು ತಿಳಿಯುತ್ತ, ಪ್ರಜೆಗಳನ್ನು ಧರ್ಮದಿಂದ ಪರಿಪಾಲಿಸುತ್ತಿದ್ದ. ಅಧರ್ಮವನ್ನು ಬಿಟ್ಟು, ದಾನಶೀಲನಾಗಿ, ಸತ್ಯಸಂಧನಾಗಿ, ಕೀರ್ತಿವಂತನಾಗಿ ಅಖಂಡರಾಜ್ಯವನ್ನು ಪರಿಪಾಲಿಸುತ್ತ ಆ ಸಾಕೇತಪುರದಲ್ಲಿ ವಾಸಿಸುತ್ತಿದ್ದ. ಆತನಿಗೆ ಶತ್ರುಗಳೆನ್ನುವರು ಇರಲಿಲ್ಲ. ಎಲ್ಲಾ ರಾಜರುಗಳು ಮಿತ್ರರಾಗಿದ್ದರು. ಸಾಮಂತರಾಜರುಗಳು ಭಯಪಟ್ಟು ಅತಿವಿನಯದಿಂದ ಆತನಲ್ಲಿ ನಡೆದುಕೊಳ್ಳುತ್ತಿದ್ದರು. ಆ ಮಹಾರಾಜನಿಗೆ ಸೌಂದರ್ಯ ಸೌಶೀಲ್ಯಾದಿ ಗುಣಗಳಿಂದ ಕೂಡಿದ ಕೌಸಲ್ಯ ಕೈಕೇಯಿ, ಸುಮಿತ್ರೆ ಎಂಬ ಮೂವರು ಹೆಂಡತಿಯರಿದ್ದರು. ದಶರಥಮಹಾರಾಜನು ಮಹಾತಿಶಯದಿಂದ ಉತ್ತಮ ಆಡಳಿತಜ್ಞನಾಗಿ ಬಹಳ ವರ್ಷಗಳು ರಾಜ್ಯಪರಿಪಾಲನೆ ಮಾಡಿದ. ಹೀಗಿದ್ದರು ಸಹ ಪುತ್ರ ಸಂತಾನವಿಲ್ಲದ ಕಾರಣ ಬಹಳ ದುಃಖಾಕ್ರಾಂತನಾಗಿ ಒಂದು ದಿನ ಕುಲಗುರುವಾದ ವಸಿಷ್ಠ ಮಹರ್ಷಿಗಳನ್ನು ವಿನಯ ಪೂರ್ವಕವಾಗಿ "ಇಷ್ಟು ವೈಭವೋಪೇತ ಸಕಲ ಸಂಪದ್ಭರಿತವಾದ ರಾಜ್ಯವಿದ್ದರೂ ಸಹ ಏನು ಪ್ರಯೋಜನ? ಪುತ್ರಸಂತಾನವಿಲ್ಲದೆ ನಾನೆಂತ ಭಾಗ್ಯವಂತನೆಂದು ಹೇಳಬಹುದು? "ಅಪುತ್ರಸ್ಯ ಗತಿರ್ನಾಸ್ತಿ" ಎನ್ನುವ ಆರ್ಯೋಕ್ತಿಯನ್ನನುಸರಿಸಿ ಎಂತಹ ಧಾರ್ಮಿಕನಾದರು ಸಹ ಪುತ್ರ

ಸಂಪದವಿಲ್ಲದವನು ನರಕಕ್ಕೆ ಹೋಗುವನಲ್ಲವೆ! ಅಂತಹ ನರಕದಿಂದ ಪಾರಾಗಲು ಒಬ್ಬ ಪುತ್ರ ನಿಲ್ಲದಲ್ಲಿ ಇತರ ಸತ್ಕರ್ಮಗಳು ಎಷ್ಟುಮಾಡಿದರೂ ಸಾಲದು. ಆದಕಾರಣ ಇಂತಹ ಭಾಗ್ಯ ಸಂಪದಗಳಿದ್ದರೂ ಸಹ ನನ್ನಿಂದ ಈ ಸೂರ್ಯವಂಶಕ್ಕೆ ಕಳಂಕವು ಬಂದಿದೆ. ಅಂತಹ ಔನ್ನತ್ಯವಿದ್ದೂ ರಘು ಕುಲಕ್ಕೆ ನಿಷ್ಕಲಂಕವಾಗಿ ಸೇವೆ ಮಾಡುವ ಸಾಮರ್ಥ್ಯ ನನಗಿಲ್ಲದಂತಾಗಿ ನನ್ನ ಜೀವಿತ, ನನ್ನ ರಾಜ್ಯವೈಭವ ವ್ಯರ್ಥವೆಂಬುದರಿಂದ ಪುತ್ರ ಸಂಪದ ಹೊಂದಲು ಯಾವುದಾದರೊಂದು ಉಪಾಯವನ್ನು ಹೇಳಿದಲ್ಲಿ ನಾನು ಅದೇರೀತಿ ಮಾಡುವೆ"ನೆಂದು ಅತಿವಿನಯದಿಂದ ಬಿನ್ನವಿಸಿಕೊಂಡರು.

ತ್ರಿಕಾಲಜ್ಞಾನ ಸಂಪನ್ನರಾದ ಆ ಮಹರ್ಷಿಯು ದಶರಥನ ದೈನ್ಯವಚನಗಳನ್ನು ಕೇಳಿ ಜ್ಞಾನ ದೃಷ್ಟಿಯಿಂದ ಆಲೋಚಿಸಿದ. ಆಗ ಆ ಮಹರ್ಷಿಗೆ "ಅಸುರ ಬಾಧೆಗಳನ್ನು ತಡೆಯಲಾರದೆ ಬ್ರಹ್ಮ ರುದ್ರಾದಿ ದೇವತೆಗಳು ಸರ್ವವ್ಯಾಪಿ, ಸರ್ವಾಂತರ್ಯಾಮಿಯು ಆದ ಶ್ರೀಮನ್ನಾರಾಯಣನಲ್ಲಿಗೆ ಹೋಗಿ ಬಿನ್ನವಿಸಲು, ದೇವತೆಗಳನ್ನು ಕಂಡು ಜಗದ್ರಕ್ಷಕನಾದ ಆ ಮಹಾವಿಷ್ಣುವು ಅಭಯವನ್ನು ಕೊಟ್ಟು ತಾನು ಆ ದನುಜರನ್ನು ಸಂಹರಿಸುವೆನೆಂದು, ಅದಕ್ಕಾಗಿ ತಾನು ಅಯೋಧ್ಯೆಯನ್ನು ಪಾಲಿಸುವ ಸೂರ್ಯವಂಶನಾದ ದಶರಥನಿಗೆ ಪುತ್ರನಾಗಿ ಜನಿಸುವೆನೆಂದು, ತಾವೆಲ್ಲರು ನನಗೆ ಸಹಾಯಕರರಾಗಿ ವಾನರರಾಗಿ ಜನಿಸಿರೆಂದು ತಿಳಿಸಿ ದೇವತೆಗಳನ್ನು ಸಮಾದಾನಗೊಳಿಸಿ ಕಳಿಸಿಕೊಟ್ಟರು" ಅನ್ನುವ ಆ ವೃತ್ತಾಂತವು ಆತನಿಗೆ ಗೋಚರವಾಯಿತು.

## ಪುತ್ರಕಾಮೇಷ್ಟಿಯಾಗ

ವಸಿಷ್ಠಮಹರ್ಷಿ. ಮೇಲ್ಕಂಡ ವಿಷಯಗಳನ್ನು ತಿಳಿಸಿದವನಾಗಿ ದಶರಥನನ್ನು ಸಮಾಧಾನಪಡಿಸಿ ಶೀಘ್ರದಲ್ಲಿಯೇ ಪುತ್ರ ಸಂತಾನವನ್ನು ಹೊಂದುವೆಯೆಂತಲೂ, ಅದಕ್ಕೆ ಆತನು ಪುತ್ರಕಾಮೇಷ್ಟಿಯಾಗವನ್ನು ಮಾಡಬೇಕೆಂತಲೂ, ಆ ಯಾಗವನ್ನು ಋಷ್ಯಶೃಂಗಮಹರ್ಷಿಯಿಂದಲೇ ಮಾಡಿಸಬೇಕೆಂತಲೂ, ಅದನ್ನು ಮಾಡಲು ಆತನೇ ಸಮರ್ಥನಾದುದರಿಂದ ಆತನನ್ನು ಋತ್ವಿಜನನ್ನಾಗಿ ನೇಮಕಮಾಡಲು ತಕ್ಕ ಉಪಾಯಗಳನ್ನು ತಿಳಿಸಿ, ಅವನ ಸಹಾಯದಿಂದ ಆ ಯಾಗವನ್ನು ಪೂರ್ತಿಮಾಡುವಲ್ಲಿ, ನಿನಗೆ ಲೋಕೋತ್ತಮರಾದಂತಹ ಪುತ್ರ ಸಂಪದವಾಗುವುದೆಂದು ತಿಳಿಸಿದನು. ಅದನ್ನು ತಿಳಿದು ದಶರಥಮಹಾರಾಜನು ಬಹಳ ಸಂತೋಷಪಟ್ಟು ಪುತ್ರಕಾಮೇಷ್ಟಿ ಯಾಗವನ್ನು ಮಾಡುವ ವಿಧಾನವನ್ನು ಆ ಋಷ್ಯಶೃಂಗಮಹರ್ಷಿಗಳನ್ನು ಆ ಯಾಗಕ್ಕೆ ಕರೆತರುವ ಉಪಾಯವನ್ನು ವಸಿಷ್ಠಮಹರ್ಷಿಯಿಂದಲೇ ಕೇಳಿ ತಿಳಿದವನಾಗಿ ಅನಂತರ ಋಷ್ಯಶೃಂಗರನ್ನು ಕರೆತಂದು ಆ ಮಹರ್ಷಿ ಸಹಾಯದಿಂದ ಪುತ್ರಕಾಮೇಷ್ಟಿಯಾಗವನ್ನು ಸಾಂಗವಾಗಿ ನೆರವೇರಿಸಿದನು. ಅಗ್ನಿದೇವರು ಸಂತುಷ್ಟರಾದರು. ಆ ಅಗ್ನಿಕುಂಡದಿಂದ ಒಬ್ಬ ದಿವ್ಯಪುರುಷನು ಕಾಣಿಸಿ, ದಿವ್ಯಪಾಯಸಾನ್ನದಿಂದ ತುಂಬಿದ ಒಂದು ಸ್ವರ್ಣಪಾತ್ರೆಯನ್ನು ತಂದು ದಶರಥನನ್ನು ಕುರಿತು ತಾನು ಬ್ರಹ್ಮದೇವರಿಂದ ಬಂದವನೆಂದು, ಈ ದಿವ್ಯಪಾಯಸಾನ್ನದಿಂದ ತುಂಬಿದ ಪಾತ್ರೆಯು ಆತನು ಮಾಡಿದ ಯಜ್ಞದಿಂದ ದೇವತೆಗಳು ತೃಪ್ತಿಹೊಂದಿರುವರೆಂದು ಅದಕ್ಕಾಗಿ ಈ ಪಾಯಸವು ಪ್ರಾಪ್ತವಾಯಿತೆಂದು ಇದರಿಂದ ಪುತ್ರಸಂತಾನ, ಸಂಪದ ಆಯುರಾರೋಗ್ಯಗಳು ಸಿದ್ಧಿಸುವುದೆಂದು ತಿಳಿಸಿ ಆ ಪಾಯಸಪಾತ್ರೆಯನ್ನು ದಶರಥನಿಗೆ ಕೊಟ್ಟು ಅದನ್ನು ಆತನ ಪತ್ನಿಯರಿಗೆ ಹಂಚಲು ತಿಳಿಸಿ ಅಂತರ್ಧಾನವಾದನು. ದಶರಥನು ಸಂತೋಷದಿಂದ ಆ ಪಾಯಸವನ್ನು ಹೊಂದಿದವನಾಗಿ ತನ್ನ ಪತ್ನಿಯರಾದಂತ ಕೌಸಲ್ಯೆ, ಕೈಕೇಯಿ, ಸುಮಿತ್ರರನ್ನು ಕರೆದು ಪಾಯಸವನ್ನು ಅರ್ಧಭಾಗ ಮಾಡಿ ಕೌಸಲ್ಯಗೂ ಇನ್ನು ಅರ್ಧಭಾಗದಲ್ಲಿ ಅರ್ಧವನ್ನು ಕೈಕೇಯಿಗೂ ಮಿಕ್ಕ ಅರ್ಧಭಾಗವನ್ನು ಸುಮಿತ್ರೆಗೂ, ಅಗರಲ್ಲಿ ಉಳಿದ ಭಾಗವನ್ನು ಕೂಡ ಮತ್ತೆ ಸುಮಿತ್ರೆಗೂ ಕೊಟ್ಟರು. ಹೀಗೆ ದಶರಥನ ಪತ್ನಿಯರು ಪಾಯಸವನ್ನು ಹೊಂದಿದವರಾಗಿ ಆ ಮೂವರು ಗರ್ಭವನ್ನು ಹೊಂದಿದರು.

## ಶ್ರೀರಾಮ, ಲಕ್ಷ್ಮಣ, ಭರತ, ಶತ್ರುಘ್ನರ ಜನನ

ಕೌಸಲ್ಯಾದೇವಿ ಗರ್ಭದಲ್ಲಿ ಚೈತ್ರಮಾಸದ ನವಮಿ ತಿಥಿ ಪುನರ್ವಸು ನಕ್ಷತ್ರದಲ್ಲಿ ಐದು ಗ್ರಹಗಳು ಉಚ್ಛಸ್ಥಿತಿಯಲ್ಲಿರುವಾಗ ಕಟಕಲಗ್ನದಲ್ಲಿ ಸಕಲ ಜಗನ್ನಾಯಕನೂ, ಸರ್ವಲೋಕ ನಮಸ್ಕೃತನು, ಸಕಲ ಕಲ್ಯಾಣಗುಣಾಕರನು, ಮಹಾಭಾಗ್ಯವಂತನು, ಆದ ವಿಷ್ಣುವಿನ ಅರ್ಧಾಂಶ ರಾಮನೆಂಬ ಪುತ್ರನು ಜನಿಸಿದನು. ಕೈಕೇಯಿ ಗರ್ಭದಲ್ಲಿ ಭರತನು ಮತ್ತು ಸುಮಿತ್ರೆ ಗರ್ಭದಲ್ಲಿ ಲಕ್ಷ್ಮಣ, ಶತ್ರುಘ್ನರು ಜನಿಸಿದರು. ದೇವತೆಗಳು ಪುಷ್ಪವರ್ಷವನ್ನು ಸುರಿಸಿದರು. ಗಂಧರ್ವರು ಇಂಪಾಗಿ ಹಾಡತೊಡಗಿದರು, ಅಪ್ಸರೆಯರು ಕುಣಿದಾಡಿದರು, ದೇವದುಂದುಬಿಗಳು ಸಂತಸಶಬ್ದವನ್ನು ಮಾಡಿದವು, ಅಯೋಧ್ಯಾನಗರದ ಪ್ರಜೆಗಳೆಲ್ಲರೂ ಸಂತೋಷದಿಂದ ಆ ಉತ್ಸವವನ್ನು ಕೊಂಡಾಡಿದರು ಹಾಗೂ ನರ್ತನ ಮಾಡಿದರು. ಒಂದು ಕಡೆ ಗಾಯಕರು ಹಾಡಿದರು, ಮತ್ತೊಂದುಕಡೆ ಹಲವಿಧವಾದ ವಾದ್ಯಗಳನ್ನು ಬಾರಿಸಿದರು, ಸೂತಮಾಗದವಂದಿಜನರು ಸ್ತೋತ್ರವನ್ನು ಮಾಡುತ್ತಿದ್ದರು. ದಶರಥನು ಪುತ್ರೋತ್ಸವದೊಂದಿಗೆ ಬ್ರಾಹ್ಮಣೋತ್ತಮರಿಗೆ ಹಸುಗಳನ್ನು, ಹೇರಳವಾದ ಧನವನ್ನು ದಾನವಾಗಿ ಕೊಟ್ಟನು, ಮತ್ತು ಪೌರಾಣಿಕರಿಗೆ, ವಂಶಾವಳಿಯನ್ನು ಸ್ತುತಿಸುವವರಿಗೆ, ಮಾಗಧರಿಗೆ, ಸ್ತುತಿಪಾಟಕರಿಗೆ, ವಂದಿಜನರಿಗೆ ತಕ್ಕರೀತಿ ಪಾರಿತೋಷಿಕಗಳನ್ನು ಕೊಟ್ಟರು.

ದಶರಥನು ಮಕ್ಕಳು ಹುಟ್ಟಿದ ೧೨ನೇ ದಿನದಂದು ನಾಮಕರಣ ಮಾಡಲೋಸುಗ ವಸಿಷ್ಠ ಮಹರ್ಷಿಯನ್ನು ಕರಿಸಿ ಆತನಿಂದ ಜ್ಯೇಷ್ಠನಿಗೆ ರಾಮನೆಂದು, ಕೈಕೇಯಿ ಸುತನಿಗೆ ಭರತನೆಂದು, ಸುಮಿತ್ರೆಯ ಮಕ್ಕಳಲ್ಲೊಬ್ಬನಿಗೆ ಲಕ್ಷ್ಮಣನೆಂದು ಮತ್ತೊಬ್ಬನಿಗೆ ಶತ್ರುಘ್ನನೆಂದು ನಾಮಕರಣ ಮಾಡಿದರು. ಹೀಗೆ ನಾಮಕರಣ ಮಾಡಿಸಿ ಆ ಪಟ್ಟಣವಲ್ಲಿದ್ದಂತ ಬ್ರಾಹ್ಮಣರಿಗೆ ಭೋಜನವನ್ನಿಡಿಸಿ, ಅನೇಕ ರತ್ನರಾಸುಗಳನ್ನು ದಾನಮಾಡಿದನು. ಆ ಕುಮಾರರಿಗೆಲ್ಲ ಜಾತಕರ್ಮಾದಿ ಸಮಸ್ತ ಶುಭಕರ್ಮಗಳನ್ನು ಮಾಡಿಸಿ ಬ್ರಹ್ಮಪದವಿ ಹೊಂದಿದವನಂತೆ ಬಹಳ ಸಂತೋಷವಾಗಿದ್ದನು.

-- ಶ್ರೀ ರಾಮಾರ್ಪಣಮಸ್ತು --

## ಫಲಶ್ರುತಿ :

ಶ್ರೀರಾಮ ಜನನವನ್ನು ಯಾರು ಶ್ರದ್ಧಾಭಕ್ತಿಯಿಂದ ಪೂಜಿಸಿ ಓದುವರೊ ಅವರಿಗೆ ಸಕಲ ಸಂಪದಗಳು ಕೂಡಿಬರುತ್ತೆ ಹಾಗೂ ಶ್ರದ್ಧಾಭಕ್ತಿಯಿಂದ ಯಾರು ಕೇಳುವರೋ ಅವರು ದೀರ್ಘಾಯುವನ್ನು ಹೊಂದುವರು. ಈ ಪುಣ್ಯ ಚರಿತ್ರೆಯನ್ನು ಭಕ್ತಿಯಿಂದ ಯಾರು ಬರೆಯುವರೋ ಮತ್ತು ಬರಿಸುವರೋ ಅವರಿಗೆ ಸಕಲೈಶ್ವರ್ಯ ಸುಖಸಂಪದಗಳು ಒಡಗೂಡುವುದು. ಕಡೆಗೆ ಸ್ವರ್ಗಾದಿ ಭೋಗಗಳನ್ನು ಅನುಭವಿಸಿ ಶ್ರೀ ವೈಕುಂಠಪದವಿಗೆ ಏರುವರು. ಇದರಲ್ಲಿ ಸಂದೇಹವಿಲ್ಲ. --ಸಮಾಪ್ತಿ.



# ವರ-ವಿಹಾರ

---ಸಂತಹರಿಹರಾನಂದಸರಸ್ವತೀ.

ರಾವಣ, ಕುಂಭಕರ್ಣ, ವಿಭೀಷಣರು ಒಮ್ಮೆ ಪ್ರತ್ಯೇಕ ಪ್ರತ್ಯೇಕವಾಗಿ ಬೇರೆ--ಬೇರೆ ಸ್ಥಳಗಳಲ್ಲಿ ಬ್ರಹ್ಮ ದೇವನನ್ನು ಕುರಿತು ತಪಸ್ಸು ಮಾಡಿದರು. ಕೆಲ ಕಾಲಾನಂತರದಲ್ಲಿ, ತೀವ್ರತರವಾದ ರಾವಣನ ತಪ ಸ್ಸಿಗೆ ಬ್ರಹ್ಮದೇವ, ಪ್ರತ್ಯಕ್ಷನಾಗಿ -- ವತ್ಸಾ ನಿನ್ನ ಭಕ್ತಿಗೆ ಸಂತುಷ್ಟನಾಗಿದ್ದೇನೆ. ತಪಸ್ಸು ಮಾಡಿದ ಕಾರಣ ವಾದರೂ ಏನು? ನಿನ್ನ ಅಪೇಕ್ಷೆ ಏನು? ಎಂದು ಕೇಳಿದ. ತರುವಾಯ ದಶಕಂಠನು -- ಓ, ಪರ ಮೇಷ್ಠೀ! ನಾನು ಧನ್ಯನಾದೆ. ನಿನ್ನಿಂದ ನಾನು ಬೇಡು ವುದಿಷ್ಟು--

"ಈ ಬ್ರಹ್ಮಾಂಡದಲ್ಲಿ ನನಗೆ ಯಕ್ಷ, ರಾಕ್ಷಸ, ಕಿನ್ನರ, ಕಿಂಪುರುಷ, ಗರುಡ, ಗಂಧರ್ವರನ್ನೂ ಸೇರಿ ಕೊಂಡಂತೆ ಯಾವ ದೇವರುಗಳಿಂದಲೂ ಸಾವೇ ಬಾರದಂತೆ ವರನೀಡಿ. ನಾನು "ಮೃತ್ಯು"ರಹಿತನಾಗಿ ಅಮರನಾಗಿ ಇಲ್ಲಿ ಈ ಲೋಕದಲ್ಲಿ ಜೀವಿಸಬೇ ಕೆಂಬುದು ನನ್ನ ಮಹದಿಚ್ಛೆ". ಅವನ ಬೇಡಿಕೆಗೆ ಉತ್ತರವಾಗಿ ಬ್ರಹ್ಮದೇವನು, "ಓ ಲಂಕೇಶ! ಮರ ಣವೇ ಬಾರದಂತೆ ನಿನ್ನನ್ನು ಇಲ್ಲಿ ಈ ಜಗತ್ತಿ ನಲ್ಲಿ ಅಮರತ್ವ ನೀಡಿ ಶಾಶತವಾಗಿ ಇಡಲು ಸಾಧ್ಯ ವಿಲ್ಲ. ಅದು ನನ್ನ ನಿಯಮಕ್ಕೆ ಮತ್ತು ಪ್ರಕೃತಿಧ ರ್ಮಕ್ಕೆ ಕೂಡ ವಿರುದ್ಧವಾದುದು. ಇಲ್ಲಿ ಬಂದ ವರ್ಯಾರೂ ಈ ವರೆಗೆ ಶಾಶ್ವತವಾಗಿ ಉಳಿದಿಲ್ಲ. ತಮ್ಮ-- ತಮ್ಮ ಅವಧಿ ತೀರಿದ ಬಳಿಕ ತಮ್ಮ ಬದು ಕನ್ನು ಮುಗಿಸಿದ್ದಾರೆ. ಪ್ರತಿಯೋರ್ವರಿಗೂ, ಪ್ರತಿ ಯೊಂದು ಜೀವಿಗೂ ಇಲ್ಲಿ ಅಂತ್ಯವೆನ್ನುವುದು ಇದೆ. ಅದು ಅನಿವಾರ್ಯ. ಆದ್ದರಿಂದ ನಿನಗೂ ನಾನು ಈ ಅನಿವಾರ್ಯತೆಯನ್ನು ಅನ್ವಯಮಾಡದೇ ವಿಧಿ ಇಲ್ಲ. (ಆದರೆ) ನಿನ್ನ ಇಚ್ಛೆಯಲ್ಲಿ "ಯಕ್ಷಾದಿ ದೇವ -- ಗಂಧರ್ವರಿಂದ ಸಾವು -- ಮರಣ" ಬೇಡವೆಂದು ಕೇಳಿರುವುದರಿಂದ ಅದನ್ನು ಪೂರೈಸಿಕೊ. ಆದರೆ ವಿಧಿವಿಹಿತ 'ಮೃತ್ಯು'ವಿನಿಂದ ನೀನು ತಪ್ಪಿಸಿಕೊಳ್ಳ ಲಾರೆ." ಎಂದು ನುಡಿದು-- ವಿಷ್ಣು ಅಂಶಸಂಭೂ ತನಾದ ನರರೂಪೀ ಪುರುಷೋತ್ತಮನಿಂದ ನೀನು ನಿನ್ನ ಅಂತ್ಯವನ್ನು ಕಾಣುವೆ. ಆ ನರರೂಪೀ ಪುರು ಷೋತ್ತಮ ಬೇರಾರೂ ಅಲ್ಲ. ಅವನೇ ಲೋಕವಿಶ್ವ ತನಾಗಿರುವ ದಾಶರಥಿ ಶ್ರೀರಾಮ -- ಎಂದು ಹೇಳಿ ಅದೃಶ್ಯನಾದ.



ತರುವಾಯ -- ರಾವಣಾನುಜನಾದ ಕುಂಭಕ ರ್ಣನಲ್ಲಿಗೆ ಬಂದ ಬ್ರಹ್ಮದೇವರು ನಿನ್ನ ಅಪೇಕ್ಷೆ ಏನು ವತ್ಸಾ ಎಂದು ಕೇಳಿದ.

ಕುಂಭಕರ್ಣನು ಈ ಮುನ್ನವೇ ತನ್ನ ರೀತಿಗಿಂತ ಸ್ವಲ್ಪ ಭಿನ್ನವಾಗಿ ಕೇವಲ "ಒಂದೇ ವಾಕ್ಯ"ದಲ್ಲಿ ತನಗೂ ಸಾವು ಬಾರದಂತೆ ವರನೀಡಿ ಅನುಗ್ರಹಿಸ ಬೇಕು ಎಂದು ಬೇಡುವ ಸಂಕಲ್ಪದಲ್ಲಿ ತಪಸ್ಸನ್ನಾ ಚರಿಸುತ್ತಿದ್ದ. ಬ್ರಹ್ಮನ ಮುಂದೆ ಅವನ ಬಾಯಿಂದ ಬರಬೇಕಾಗಿದ್ದ ವಾಕ್ಯ -- ನಿಧ್ವತ್ವಂ ದೇಹಿ ಎಂದು. ಎಂದರೆ ನನಗೆ ಮರಣ ರಹಿತ ಜೀವನವನ್ನು ಕರುಣಿಸು ಎಂದು ಕೇಳುವುದಾಗಿತ್ತು. ಅದೇಸ ಮಯ ಆಕಸ್ಮಿಕವೋ ಎನ್ನುವಂತೆ ಅಲ್ಲಿಗೆ ಸ್ವಲ್ಪ ದೂರ ಹೋಗುತ್ತಿದ್ದ ನಾರದರು ದುಷ್ಟನಾದ ಕುಂಭ ಕರ್ಣನ ಕೆಟ್ಟ ಸ್ವಾರ್ಥಕ್ಕೆ ಕಡಿವಾಣ ಹಾಕದಿದ್ದರೆ ಕೆಲಸ ಕೆಟ್ಟೀತೆಂದಾಲೋಚಿಸಿ ಬ್ರಹ್ಮದೇವ ವರವನ್ನು ಅನು ಗ್ರಹಿಸುವುದರೊಳಗೆ ಕಾರ್ಯ ಸಾಧಿಸಬೇಕೆಂದು ಸಂಕಲ್ಪಿಸಿ -- ಕೂಡಲೇ ವೈಕುಂಠನಾಥನಾದ ಶ್ರೀವಿ ಷ್ಣುವಿನ ಬಳಿಗೆ ಹೋಗಿ. ವಿಷಯವನ್ನೆಲ್ಲ ಸಾದ್ಯಂ ತವಾಗಿ ತಿಳಿಸಿ, ಪರಮಾತ್ಮಾ! ಹೇಗಾದರೂ ಮಾಡಿ ಕುಂಭಕರ್ಣನ ಸಂಕಲ್ಪ ಫಲಿಸದಂತೆ ನೀನು ಮಾಡಿ ದರೆ ಲೋಕಕ್ಕೆ ಕ್ಷೇಮವೆಂದು ಬೇಡಿದರು. ವಿಷ್ಣುವು ತತ್ಕ್ಷಣವೇ ತನ್ನ ಮಾಯೆಯನ್ನು ಕರೆದು ರಾವಣಾ ನುಜ ಕುಂಭಕರ್ಣನಲ್ಲಿ ನಿದ್ರಾದೇವಿ ನೆಲಸುವಂತೆ ಆತನ ನಾಲಗೆಯಿಂದ ತೊದಲುನುಡಿಯಾಡಿಸು ಎಂದಾಣತಿಯಿತ್ತು ಮಾಯೆಯನ್ನು ಕಳುಹಿಸಿದ. ತಾವು ಬಂದ ಕೆಲಸವಾಯ್ತೆಂದು ನಾರದರು ಪರ ಮಾತ್ಮನಿಗೆ ಭಕ್ತಿಯಿಂದ ವಂದಿಸಿ ನಡೆದರು.

ಇತ್ತ ಮಾಯೆ ಕುಂಭಕರ್ಣನಿಗೆ ನಿದ್ರಾದೇವಿ ವಶ ಳಾಗುವಂತೆ ಮಾಡಿ -- ವಿಷ್ಣು ಪದವನ್ನು ಸೇರಿದಳು. ನಿನ್ನ ವರವೇನು? ಎಂದು ಬ್ರಹ್ಮದೇವ ಕೇಳಿದಾಗ -- ಅವನ ಬಾಯಿನಲ್ಲಿ ಹೊರಟದ್ದು "ನಿಧ್ವತ್ವಂ" ದೇಹಿಗೆ ಬದಲಾಗಿ "ನಿದ್ರತ್ವಂ ದೇಹಿ" ಎಂಬ ಪದ ಬ್ರಹ್ಮದೇವನು 'ತಥಾಸ್ತು' ಎಂದ. ಈಗ ವಿಭೀಷ ಣನ ಸರದಿ. "ವತ್ಸಾ ನೀನು ತಪಸ್ಸು ಮಾಡಿದು ದರ ಉದ್ದಿಶ್ಯವಾದರೂ ಏನು?" ಎಂದ ಬ್ರಹ್ಮದೇ ವನ ಪ್ರಶ್ನೆಗೆ ಉತ್ತರವಾಗಿ ವಿಭೀಷಣನು "ಓ, ಬ್ರಹ್ಮ ದೇವಾ! ನನ್ನಲ್ಲಿ "ಸತ್ವಗುಣ" ವು ಸದಾ ನೆಲೆಸಿದ್ದು, ನಿರಂತರ ನನ್ನ ಮನಸ್ಸು ಸನಾತನ ಧರ್ಮದ ಪರ ವಾಗಿರುವಂತೆ, ನನ್ನ ಈ ಜನ್ಮಸಾರ್ಥಕ್ಯಕ್ಕೆ ಪೋಷ ಕವಾದ 'ಆಧ್ಯಾತ್ಮಿಕ' ಮನೋಧರ್ಮವನ್ನು ನನಗೆ ನೀಡು ಅಷ್ಟೇ ನಾನು ಬೇಡುವ ವರ" ಎಂದ ವಿನ ಯದಿಂದ.

ವಿಭೀಷಣನ ಬೇಡಿಕೆಯಿಂದ ಸಂತುಷ್ಟನಾದ ಬ್ರಹ್ಮದೇವನು -- ವತ್ಸಾ, ನಿನ್ನಿಚ್ಛೆಯನ್ನು ಪೂರೈಸಿ ದ್ದೇನೆ. ಹಾಗೆಯೇ ಆಗಲಿ ಎಂದು ನುಡಿದು ಅದೃಶ್ಯ ನಾದ.



# ಶಬರಿ

---ಕಡಬಂ ದೊರೆಸ್ವಾಮಿ ಅಯ್ಯಂಗಾರ್ಯ

ರಾಘವನ ದಯೆಯಿಂದ ಮೋಕ್ಷಪದವಿಯನೈದಿ
ಕಬಂಧನರೆಗಳಿಗೆ ಗಗನಾಂಗಣದೊಳು ನಿಂತು
ಪಂಪಾ ಸರೋವರದ ಮಧುಮಧುರ ಫಲಪುಷ್ಪ
ಕುರುಗಿರ್ದ ತರುನಿಬಿಡ ಶೈಲ ವನ ಪಂಕ್ತಿಯನು
ತೋರಿದನು.ಸುಗ್ರೀವ ಸಖ್ಯವನು ಗಳಿಸಲ್ಕೆ ಶ್ರೀರಾಮ
ಲಕ್ಷ್ಮಣ, ವನಲಕ್ಷ್ಮಿಯಾಗರದ ಸೌಭಾಗ್ಯ
ಸಂಪದವ ಸೋದರರು ಕಂಡು ಮನಸೋತು, ಗಿರಿ--
ಪಂಪಾ ಸರೋವರದ ಪಡುವಣ್ಗೆ ಮುಂಬರಿದು
ಮನೋಹರ ರಾಮಣೀಯಕ ರಚನೆಯಿಂದೆಸೆವ

ಶಬರಿ ಯಾಶ್ರಮದ ತರುಷಂಡ ಮಂಡಲವ
ಮೆಚ್ಚಿದಾನಂದದಲಿ ತಪಸ್ವಿನಿ ಯುಟಜವನು
ಪೊಕ್ಕೊಡನೆ ಹೊನ್ನರೆಯ ಬಗ್ಗಿದೊಡಲಿನ ನರೆತ
ಹುಬ್ಬುಗಳ ಕಣ್ಮುಸುಕಿ ಸಲೆ ಬತ್ತಿದಾ ನನದ
ಜೋಲ್ಗಿವಿಯ ಪಲ್ಲುದುರಿದೌಡುಗಳ ಜೀರ್ಣಾಂಗಿ
ಮಾದವಸಿ ಶಬರಿಯನು ಕಂಡೊಡನೆ ನಿಜಪುಣ್ಯ
ಫಲಸಂಪ್ರಾಪ್ತಿ ತನಗಾಯ್ತೆನುತ ಬಹು ಕಾಲದಿಂ
ಕಾದಿರ್ದ ಮುದಿಗೂಡಿನಾತ್ಮವನು ನೋಂಪಿಯಲಿ
ಬಳಲಿಸಿದ ಯೋಗಿನಿಯು ಮುಪ್ಪಿನಿಂ ಕಂಪಿಸುವ
ಕರಪುಟಂಗಳ ಮುಗಿದು ತತ್ತರಿಸಿ ಸೋದರರ

ಪಾದಗಳ ಬಿಗಿವಿಡಿದು ಚಾಚಿದಳು ಮಸ್ತಕವ.
ರಘುಪತಿಯ ಶುಭಕರದ ಮೂರ್ತಿಯನು ನಿಜಹೃದಯ
ತಾಮರಸ ಕೋಶದೊಳು ನಿಲಿಸಿ, ಪರಮಾನಂದ
ಭರಿತೆ ಪೊಂಪುಳಿವೋಗಿ ವಿಧ್ಯುಕ್ತ ರೀತಿಯಲಿ
ಅರ್ಘ್ಯ ಪಾದ್ಯಾಚಮನಗಳ ನಿತ್ತು ಸತ್ಕರಿಸಿ,
ಕೋಲೂರಿ ನಿಂತಳಾ ತಪೋಧನೆ ಭಕ್ತಿಯಿಂ
ಕಂಬನಿಯೊರತೆ ಸುಕ್ಕು ಕದಪಿನಿಂದುರುಳುತಿರೆ,
ಬಿನ್ನಯಿಸಿದಳು ತನ್ನ ಭೀಷ್ಪವನು ತೊದಲುತ್ತ
ಪರಮ ಮಂಗಳಮೂರ್ತಿ ರಾಘವನು ತಪಸ್ವಿನಿ
ಶ್ರಮಣೆಯನು, 'ಎಲೆ ಶಬರಿ, ಕೋಪವೆಂಬುದನರ್ಥ

ಸಾಧಕವ್ನ, ಮಾನಸಿಕ ಚಾಂಚಲ್ಯ, ಕಣ್ಸೆಳೆವ
ಕಡುನಿದ್ದೆ, ನಾಲಗೆಯ ಚಾಪಲ್ಯಗಳ ಗೆದ್ದು
ಸತ್ಸೇವೆಗಳ ನೆಸಗಿ ಪಡೆದಿಹೆಯ ಸಿದ್ಧಿಯ ನೆನೆ ?"
"ಆದಿ ಪುರುಷನನಂತ ಗುಣಗಣೆಯೆ, ನಿಮ್ಮಡಿಯ
ಕಣ್ಣಾರ ಕಂಡೆನಗೆ ಸರಿದುದೈ ನಿಡುಬಯಕೆ;
ಬಡದವಸಿಗೀ ಜನ್ಮಸಾಫಲ್ಯ ಸಿದ್ಧಿಸಿತು;
ತವದ ಫಲ ಸಿಲುಕಿದುದು ಗುರುಪಾದ ಪಂಕಜದ
ಪೂಜೆಯಿಂದೆನಗೆಂದು ನಿರುತದಿಂ ಮೋಕ್ಷಫಲ
ಸಂಪ್ರಾಪ್ತಿ; ನಿಮ್ಮಡಿಯ ಕರುಣಾವಲೋಕನದ
ಲಹರಿಯಲಿ ತೇಲಿದೀ ಬಡಜೀವ ಸದ್ಗತಿಯ

ಸಾಧನೆಗೆ ಪರಿಪೂತೆ ನಾನಾದೆ; ತೆರಳುವೆನು
ಮೋಕ್ಷಲಕ್ಷ್ಮಿಯಕ್ಷಯ ಸಾಮ್ರಾಜ್ಯ ಸಂಪದಕೆ;
ನಿಮ್ಮಡಿಯ ಕರುಣೆಯಿದು, ದಯಾಧನ ಜಗತ್ಪತೆ!
ವಿಪಿನ ವಿಲಸಿತ ಚಿತ್ರಕೂಟಕೈದಿದಂದೇ
ಆಚಾರ್ಯಪರಿಚರ್ಯೆಗೊಲಿದೆನ್ನ ಗುರುದೇವ
ಮಾತಂಗಮುನಿಮೌಳಿ ಅಡರಿದರು ನಿರ್ವೃತಿಗೆ
ದೀಪ್ತ ಜ್ವಲನ ತೇಜಸರು ಧರ್ಮರಹಸ್ಯವ
ನೆರೆಯರಿತ ಪೂತಾತ್ಮಋಷಿವರ್ಯರೊಂದು ದಿನ,
ಎಲೆ ಶಬರಿ, ನಿನ್ನ ರಘುರಾಮ ನೈತರುವನೀ
ಪರಮ ಪುಣ್ಯಾಶ್ರಮಕ ತಿಥಿಯಾಗಿ ತನ್ನನುಜ



ಸೌಮಿತ್ರಿಯೊಡಗೂಡಿ; ನೀ ನವರ ಸತ್ಕರಿಸಿ
ಪೂಜಿಪ್ಪುದು ಮನವೊಲಿದಮಿತ ಭಕ್ತಿಭಾವದೊಳು;
ಪಂಪಾಸರೋವರದ ತೀರದೊಳು ತುರುಗಿರ್ದ
ಮಧುರತರ ಫಲಪುಷ್ಪಕಂದಗಳ ನಿಮಗೆಂದು
ಜಾತೀಯ ಮಾಧುರ್ಯ ಫಲಪುಷ್ಪ ಮೂಲಗಳ
ಪರಿಕಿಸುತ ಬಹುಕಾಲ ಬಚ್ಚಿಟ್ಟು ತಂದಿಹೆನು
ಸ್ವೀಕರಿಸು ತಂದೆ, ಎಂದ ನಿಜಾಚಾರ್ಯ ವರ
ಪ್ರಸಾದ ಲಬ್ಧ ಬ್ರಹ್ಮಜ್ಞಾನಿ ಶಬರಿಯನು,
ವೃದ್ಧೆ ಯಂತರಂಗದ ಭಾವಶುದ್ಧಿಯನರಿತು,
"ಎಲೆ ಶಬರಿ, ದನುಕುಲದ ಕಬಂಧನರುಹಿದನು

ಮಹಾಮತಿ ಮಾತಂಗ ಮುನಿವರರ ಮಹಿಮೆಯನು,
ನೀನೊಪ್ಪಿದಡೆ ಮಹಾತ್ಮರವರನು ಕಣ್ಣಾರ
ಕಂಡನು ಭವಿಸುವೆನು ಸಂದರ್ಶನದ ಸಂಪದವ"
ಇಂತೆಂಬ ರಾಘವನ ವದನಾರವಿಂದದಿಂ
ಭಕ್ತಿರಸ ಸಂಯುಕ್ತ ವಚನಾಮೃತವ ನೀಂಟಿ,
ನೀರುಂಡ ಕಾರ್ಮೋಡದಂತೆಸೆವ ಮೃಗಪಕ್ಷಿ
ಸಂಕಲಿತ ಪುಣ್ಯಾಶ್ರಮವು ಕಣಾ, ಮಹಾಮುನಿ
ಮತಂಗರಾತ್ಮವಿದರೆನ್ನ ಗುರು ಪರಿಪೂತ
ಮಂತ್ರಾಗ್ನಿ ಗರ್ಪಿಸಿದರು ಉರುತರದ ದೇಹವನು
ವಿಧ್ಯುಕ್ತ ರೀತಿಯೊಳು, ರಘುವರನೆ, ನೋಡಿತ್ತ

ನಾನೆಸಗಿದುಪಚಾರವನು ಮೆಚ್ಚಿ ವೃದ್ಧಮುನಿ
ನಿರ್ಮಿಸಿದ ಪಡುವಣೇ ನಿಮ್ನಮುಖ ವೇದಿಕೆಗೆ
ವಿವಿಧ ಕುಸುಮಾಂಜಲಿಯ ನರ್ಪಿಸುತ, ಕಂಪಿಸುವ,
ನಿಜಕರಂಗಳಿಂದರ್ಚಿಸಿದ ಪರಿಪೂತಾಗ್ನಿ,
ಪಜ್ವಳಿಸಿ ಬೆಳಗುತಿದೆ ದಿಕ್ಕುಗಳ ಮುತ್ತಿಡುತ
ಜರ್ಝರಿತ ಕಾಯದಿಂದೆನ್ನಗುರು ಸಾಗರದ
ಮಜ್ಜನಕೆ ಪೋಪನಿತು ದೇಹ ಬಲಮಿಲ್ಲದಿರೆ,
ನೋಡತ್ತ ಸಪ್ತಸಾಗರಂಗಳೆ ಸಾರ್ತಂದ
ಸ್ನಾನಘಟ್ಟವನು, ರಘುಕುಲೋದ್ದಾಮ ಸೀಮಾ
ಪೂಜ್ಯಗುರು ಮತಂಗಮುನಿ ನೀರ್ಮಿಂದ ತಾಣಮಿದು;

ತರುಶಾಖೆಯೊಳು ನೇಲ್ದವಲ್ಕಲಂಗಳಿನ್ನೆವರ
ಬೆಂಗದಿರ ಬಿಸುಪಿನಿಂ ದಾರದಿರೆ ತೊಯ್ದಿಹುವು;
ಅರ್ಪಿಸಿದ ಪೂವಲಿಯು ಬಾಡದಿರೆ ಸೂಸುತಿದೆ
ಪೊಸದೊಂದು ಸೌರಭವ; ಕೈರವಂಗಳಿವಿನ್ನು
ಮ್ಲಾನತೆಯ ಕಂಡಿಲ್ಲ; ಮುನಿವರರ ಮಹಿಮೆಗಿದೆ
ಸಾಕಲ್ತೆ? ಓ ರಾಮ, ಋಷಿವರ್ಯರಾಶ್ರಮದ
ಮೈಸಿರಿಯ ಕಣ್ಣಾರ ಕಂಡು ಕಿವಿಯಾರ ನೀಂ
ಕೇಳಿರುವೆ; ಜಡದೇಹವಿದನಗ್ನಿಗರ್ಪಿಸುತ,
ಆ ವನುಟಜದೊಳಿರ್ದು ಆರಸೇವೆಯನೆಸಗಿದೆನೊ,
ಆ ಭಾವಿತಾತ್ಮನಡಿ ದಾವರೆಯ ಸಾರಲ್ಕೆ

ಅನುಮತಿಯ ನೆನಗಿತ್ತು ಸಲಿಸೆನ್ನ ಬಯಕೆಯನು
ಮುದಿದವಸಿ ಆಡಿದೀ ಧರ್ಮಾರ್ಥ ವಚನಗಳ
ರಾಘವರವಧರಿಸಿ ಪರಮಾನಂದದೊಳದ್ದಿ
ಅತ್ಯಾಶ್ಚರ್ಯಮಿದೆಂದು, ಸಂಶ್ರಿತವ್ರತೆಯ ನಾ
ಶಬರಿಯನು, "ಮೆಚ್ಚಾಯ್ತು ನಿನ್ನೊಚ್ಚತದ ಪೂಜೆ
ಪರಿಚರ್ಯೆಗಳು, ತೆರಳು ಸುಖಮಾಗಿ ನಿನ್ನಿಷ್ಟ
ಗುರು ಸನ್ನಿಧಿಗೆನಲು," ಜಟಾವಲ್ಕಲ ಧಾರಿಣಿ
ಕೃಷ್ಣಾಜಿ ನಾಂಬರಂಗಳನುಟ್ಟು ಅರ್ಪಿಸಿದಳು
ವಹ್ನಿಗಾಹುತಿಯಾಗಿ ನಿಜಜೀರ್ಣಕಾಯವನು
ಜ್ವಲನಾರ್ಕ ತೇಜದಿಂ ಪಜ್ವಳಿಪ ದೇಹದಿಂ

ಪರಿಪೂತೆ ದಿವ್ಯಮಾಲ್ಯಾಂಬರಂಗಳ ಧರಿಸಿ
ಪರಿಮಳದ ಗಂಧವನು ಪೂಸಿ ಸುರಸುಂದರಿಯ
ರೂಪಾಂತು ಸೆಳೆ ಮಿಂಚಿನೊಲು ತೊಳಗಿ ತಪಸ್ವಿನಿ
ಮುನಿವರರನಂತ ಶಾಂತಿಯ ಬೀಡಿಗೆಯ್ದಿದಳು
ಶಬರಿ ಯಾತ್ಮಸಮಾಧಿಯಾನಂದವನು ಬಯಸಿ

**ಯತ್ರತೇ ಸುಕೃತಾತ್ಮಾನೋ ವಿಹರಂತಿ ಮಹರ್ಷಯಃ**
**ತತ್ಪುಣ್ಯಂ ಶಬರೀ ಸ್ಥಾನಂ ಜಗಾಮಾತ್ಮಸಮಾಧಿನಾ**

--ಭಗವಾನ್ ವಾಲ್ಮೀಕಿಃ

# ಯಾಮುನರ ರಾಮಭಕ್ತಿ

---ವಿದ್ವಾನ್ 'ರಘುಸುತ'.

ತಿರಾಜ ರಾಮಾನುಜರ ರೂಪಿಸಿದ ವಿಶಿಷ್ಟಾ ಸಂಪ್ರದಾಯದಲ್ಲಿ ಶ್ರೀರಾಮಭಕ್ತಿಗೆ ಒಂದು ಷ್ಟ ಸ್ಥಾನ ನೀಡಲಾಗಿದೆ. ವಾಲ್ಮೀಕಿ ರಾಮಾ ದ ಟೀಕೆಯನ್ನು ರಚಿಸಿರುವವರಲ್ಲಿ ಮಾಧವ ಗೀಂದ್ರ, ಗೋವಿಂದಾಚಾರ್ಯ, ರಾಮಾ ಕಂದಾಳರು ಮುಖ್ಯರು. ಇವರು ಹಾಗೂ ಂಪ್ರದಾಯದ ಇನ್ನಿತರೇ ಅನುಯಾಯಿಗಳೂ ವಾಲ್ಮೀಕಿ ರಾಮಾಯಣದ ವ್ಯಾಖ್ಯಾನಗಳನ್ನು ರುವವರು.

ವುಗಳಲ್ಲೆಲ್ಲ ಗೋವಿಂದಾಚಾರ್ಯರದೇ ಅತ್ಯು ವಾದ ವ್ಯಾಖ್ಯಾನವಾಗಿದೆ. ಹನ್ನೆರಡು ವರ್ಷಗ ಗೆ ಅಖಂಡ ತಪಸ್ಸನ್ನು ಮಾಡಿ, ಶ್ರೀರಾಮನ ಧನೆಯನ್ನು ಮಾಡಿ, ಆತನ ಕೃಪೆಗೆ ಪಾತ್ರರಾದ ರವೆ ಈ ವ್ಯಾಖ್ಯಾನವನ್ನು ಬರೆಯಲು ಅವರು ಂಭಿಸಿದುದು.

ಶಿಷ್ಟಾದ್ವೈತ ಸಂಪ್ರದಾಯದ ಆದ್ಯ ಪ್ರವರ್ತ ಭಗವಾನ್ ರಾಮಾನುಜರು. ಆದರೆ ಇವರಿಗೆ ಭಕ್ತಿಯ ದೀಕ್ಷೆ ಅವರ ಪರಮಗುರುಗಳಾದ ಮುನಾರ್ಯರಿಂದಲೇ ಪ್ರಾಪ್ತವಾಗಿತ್ತು.

ಯಾಮುನರು ಶ್ರೀವೈಷ್ಣವ ಸಂಪ್ರದಾಯದ ನ್ ಆಚಾರ್ಯರಾಗಿದ್ದಾರೆ. ಇವರು ನಾಥ ಗಳ ಮೊಮ್ಮಗನೂ, ಈಶ್ವರ ಮುನಿಗಳ ೂ ಆಗಿದ್ದಾರೆ. ಇವರು ಜೀವನ ಪೂರ್ತಿ ತ್ ಸೇವೆ ಹಾಗೂ ಭಗವತ್ ಕೈಂಕರ್ಯ ರೀ ಕಳೆದಿದ್ದಾರೆ. ಇವರಿಗೆ ರಾಮಾನುಜರ ೆ ತುಂಬಾ ಪ್ರೇಮವಿದ್ದಿತು. ಶ್ರೀ ವೈಷ್ಣವ ಸಂಪ್ರ ವನ್ನು ಅವರು ಕೈಹಿಡಿದು ನಡೆಸಿಕೊಂಡು ಗುವರು ಎಂಬ ನಂಬಿಕೆ ಯಾಮುನರಿಗಿದ್ದಿತು.

ಂತೆಯೇ ಭಗವಾನ್ ರಾಮಾನುಜರಿಗೂ ಯಾಮುನರ ಬಗ್ಗೆ ಅಪಾರ ಭಕ್ತಿಭಾವವಿ

ಗವತ್ ಸೇವೆಯನ್ನು ಮಾಡುತ್ತಾ ಯಾಮು ಭಗವಂತನ ಗುಣಗಾನವನ್ನು ಸದಾ ಮಾಡು ು. ಇದರೊಂದಿಗೆ ಭಗವಂತನ ಎದುರು ತಮ್ಮ ವನ್ನು ಪ್ರಕಟಿಸುತ್ತಿದ್ದರು.

ಯಾಮುನರ ಎಲ್ಲ ರಚನೆಗಳೂ ಲಭ್ಯವಾಗಿಲ್ಲ. ು ಅವರ ಆಗಮ ಪ್ರಾಮಾಣ್ಯಂ, ಸ್ತೋತ್ರರತ್ನ ಯ ಹಾಗೂ ಗೀತಾರ್ಥ ಸಂಗ್ರಹ -- ಗ್ರಂಥಗ ನಮ್ಮವರೆವಿಗೆ ಉಳಿದು ಬಂದಿವೆ. ಯಾಮುನ ಳವಂದಾರ್ ಎನ್ನುವ ಇನ್ನೂ ಒಂದು ಹೆಸರು ು. ಇದರಿಂದ ವಿದ್ವತ್ ಜನರು 'ಸ್ತೋತ್ರ ರತ್ನ'ವನ್ನು 'ಆಳವಂದಾರ್ ಸ್ತೋತ್ರರತ್ನ'ವೆಂಬ ಹೆಸರಿನಿಂದ ಕರೆಯುವರು. ಈ ಹೆಸರೇ ವಿದ್ವಜ್ಜನರ ನಡುವೆ ಜನಪ್ರಿಯವಾಗಿದೆ. ಇದು ಒಂದು ಸಂಪ್ರದಾಯದ ಪುಸ್ತಕವಾಗದೆ ಎಲ್ಲ ಭಕ್ತ ಸಮುದಾಯದ, ಎಲ್ಲ ಸಂಪ್ರದಾಯಗಳ ವಿದ್ವಜ್ಜನ ಭಕ್ತರ ಕಂಠಹಾರವಾಗಿ ಪರಿಣಮಿಸಿದೆ.

ಚೈತನ್ಯ ಮಹಾಪ್ರಭುವೂ ಕೂಡ ತನ್ನ ಕೀರ್ತನೆಗಳಲ್ಲಿ ಹಾಗೂ ಪ್ರವಚನಗಳಲ್ಲಿ ಈ ಸ್ತೋತ್ರದ ಶ್ಲೋಕಗಳನ್ನು ಬಹಳವಾಗಿ ಉಪಯೋಗಿಸುತ್ತಿದ್ದನು ಹಾಗೂ ಅವುಗಳನ್ನು ಆನಂದದಿಂದ ಹಾಡುತ್ತಿದ್ದನು. ಇದಕ್ಕೆ ಉದಾಹರಣೆಯಾಗಿ ಚೈತನ್ಯ ಚರಿತಾಮೃತದಲ್ಲಿ ಇವುಗಳ ಉಲ್ಲೇಖವು ಬಹಳಷ್ಟು ಸಲ ಬಂದಿದೆ.

ಈ ಸ್ತೋತ್ರದಲ್ಲಿ ಅನೇಕ ದಿವ್ಯಗುಣಗಳಿವೆ. ಆದಾಗ್ಯೂ ಕಾವ್ಯರಚನೆ, ಅಲಂಕಾರಗಳ ವಿಶೇಷತೆ, ಭಾವಸೌಂದರ್ಯ, ದೈನ್ಯ ಹಾಗೂ ಭಗವಂತನ ಮೇಲೆ ಸಂಪೂರ್ಣವಾಗಿ ಆಧಾರ ಪಟ್ಟಿರುವುದು, ಶರಣಾಗತಿಯ ಪ್ರಸ್ತಾಪ ಹಾಗೂ ಯಾವುದೇ ಧರ್ಮದ ಬಗ್ಗೆ ಪಕ್ಷಪಾತವನ್ನು ತೋರದೆ ಇರುವುದು -- ಈ ಗುಣಗಳಿಂದ ಪ್ರತಿಯೊಬ್ಬ ಭಕ್ತ -- ಓದುಗನೂ, ಇವನ್ನು ಓದಿದ ಕೂಡಲೇ ಇದರ ಕಡೆಗೆ ತಪ್ಪದೆ ಆಕರ್ಷಿತನಾಗುವನು.

ಯಾಮುನರ ನಿರ್ಮಲ ಭಕ್ತಿಯು 'ಸ್ತೋತ್ರರತ್ನ'ದಲ್ಲಿ ಪ್ರಸ್ಫುಟಿತವಾಗಿದೆ. ಅವರ ಹೃದಯದಲ್ಲಿನ ಗಂಭೀರ ಅನುರಾಗ ಹಾಗೂ ಪ್ರಗಾಢ ಪ್ರೇಮಗಳು ಆ ಕಾವ್ಯದಲ್ಲಿ ಸರ್ವತ್ರ ಹರಡಿದೆ. ಪ್ರತಿ ಪದದಲ್ಲಿಯೂ ಆತ್ಮವಿಸರ್ಜನೆಯ ಭಾವ ತುಂಬಿದೆ.

ಪರಮಾತ್ಮನು ಅಶರಣರಿಗೆ ಶರಣನಾಗಿಯೂ, ನಿರಾಶ್ರಯರಿಗೆ ಆಶ್ರಯದಾತನಾಗಿಯೂ ಇರುವನು. ಆದುದರಿಂದ ಯಾಮುನರು ತಮ್ಮದೆಲ್ಲವನ್ನೂ ಪರಮಾತ್ಮನಿಗೇ ನಿವೇದಿಸಿರುವರು. ಪ್ರಾಪಂಚಿಕ ವ್ಯವಹಾರಗಳೆಲ್ಲವನ್ನು ಮರೆತು ಭಗವಂತನ ಚರಣಕಮಲಗಳ ಆಶ್ರಯ ಪಡೆಯುವುದಕ್ಕಾಗಿ ಬಹಳಷ್ಟು ವ್ಯಾಕುಲರಾಗಿರುತ್ತಾರೆ.

ಇವೆಲ್ಲಕ್ಕಿಂತ ಹೆಚ್ಚಾಗಿ ಯಾಮುನರಿಗೆ ಶ್ರೀರಾಮನಲ್ಲಿ ಅಪಾರ ಭಕ್ತಿ ಇತ್ತು ಎಂಬುದಕ್ಕೆ ಅನ್ವಯವಾಗುವ ಅನೇಕ ಶ್ಲೋಕಗಳಿವೆ. ಇವರು ಶ್ರೀರಾಮನ ಅನನ್ಯ ಭಕ್ತರು.

ಯಾಮುನರ ಹೃದಯವು ಶುದ್ಧವೂ, ಪವಿತ್ರವೂ ಆಗಿದ್ದು, ಶ್ರೀರಾಮಭಕ್ತಿಯಿಂದ ಪರಿಪೂರ್ಣಗೊಂಡಿತ್ತು.

ಶ್ರೀರಾಮನು ತನ್ನ ಭಕ್ತರನ್ನು ತನ್ನ ಹೃದಯದಲ್ಲಿ ಸದಾ ಇರಿಸಿಕೊಳ್ಳುವಂತೆ, ಭಕ್ತರೂ ಆತನನ್ನು ತಮ್ಮ ಹೃದಯದಲ್ಲಿ ಸ್ಥಾಪಿಸಿಕೊಳ್ಳುತ್ತಿದ್ದರು. ಯಾಮುನರ ವಿಚಾರದಲ್ಲಿ ಈ ಮಾತು ಸತ್ಯವಾಗಿತ್ತು.

ಅವರು ಈ ಸ್ತೋತ್ರದಲ್ಲಿ ಒಮ್ಮೆ ರಾಮನನ್ನು ಒಮ್ಮೆ ಕೃಷ್ಣನನ್ನು, ಒಮ್ಮೆ ವಾಮನ, ಒಮ್ಮೆ ಶೇಷಶಾಯಿ ಶ್ರೀಮನ್ನಾರಾಯಣನನ್ನು ಸ್ತೋತ್ರಮಾಡಿದ್ದರೂ, ಅವರವರ ನಡುವೆ ಯಾವುದೇ ಭೇದಭಾವವನ್ನೂ ತೋರುತ್ತಿರಲಿಲ್ಲ. ಎಲ್ಲರ ಗುಣಗಳನ್ನೂ ಅವರು ಸದಾ ಸ್ಮರಿಸುತ್ತಿದ್ದರು.

ಪರಮಾತ್ಮನು ಶರಣಾಗತ ವತ್ಸಲನು ಹಾಗೂ ಆಶ್ರಿತವತ್ಸಲನು, ಹಾಗೆ ಶರಣಾಗತರಾದವರ ದೋಷಗಳನ್ನು, ಪಾಪಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಅವರನ್ನೆಲ್ಲ ತನ್ನಲ್ಲೆ ಇರಿಸಿಕೊಳ್ಳುವನು. ಅವರುಗಳನ್ನೂ ಎಂದಿಗೂ ತ್ಯಜಿಸುವುದಿಲ್ಲ.

ಈ ಭಾವನೆಯನ್ನು ನೆನಪಿನಲ್ಲಿಟ್ಟುಕೊಂಡೇ ಯಾಮುನರು ಹೇಳುವರು, 'ಹೇ ಸ್ವಾಮಿ! ನೀನು ನಿನ್ನ ವಿಭೀಷಣನ ಎದುರು ಮಾಡಿದ ಪ್ರತಿಜ್ಞೆಯನ್ನು ನೆನಪಿಸಿಕೊ ! ಎಲ್ಲರೆದುರಿಗೆ 'ನಾನು ನಿಮ್ಮೆಲ್ಲರವನು!' ಎಂದು ಹೇಳಿ 'ಯಾರೇ ನನಗೆ ಶರಣಾಗಲಿ, ಒಮ್ಮೆ ಶರಣಾದವನು, ಅವನು ಎಂತಹ ಪಾಪಿಯೇ ಆಗಿರಲಿ, ಅಂತಹವನಿಗೆ ಮೂರು ಲೋಕಗಳಿಂದಲೂ ಕೂಡ ಅಭಯ ನೀಡುವೆ!' ಎಂದು -- ನಿನ್ನ ಆ ಪ್ರತಿಜ್ಞೆಯನ್ನು ನೆನಪಿನಲ್ಲಿಟ್ಟುಕೊಂಡು, ನನ್ನನ್ನು ಪೂರ್ತಿಯಾಗಿ ನಿನ್ನವನನ್ನಾಗಿ ಮಾಡಿಕೊ! ನೀನು ಹೀಗೆ ಮಾಡದೆ ಹೋದಲ್ಲಿ, ನನ್ನನ್ನೊಬ್ಬನನ್ನು ಬಿಟ್ಟು ಉಳಿದಿರುವ ಮೂರು ಲೋಕ

# ಅಶಾಂತಿಯ ಮೂಲ

---ಪಾರ್ವತಿ ಕೃ. ನ. ಮೂರ್ತಿ.

ಪ್ರಪಂಚದ ಆಗುಹೋಗುಗಳ ಬಗ್ಗೆ ಸ್ವಲ್ಪಮಟ್ಟಿನ ಕಾಳಜಿ ವಹಿಸಿ ಚಿಂತಿಸುವ ಯಾವ ವ್ಯಕ್ತಿಗಾದರೂ ಇಡೀ ಜಗತ್ತಿನ ಎಲ್ಲೆಡೆಯೂ ಅಶಾಂತಿಯ ಅಗ್ನಿಪರ್ವತ ದ್ವೇಷಾಸೂಯೆಯ ದಳ್ಳುರಿ ದಟ್ಟ ಹೊಗೆ ಉಗುಳುತ್ತಿರುವುದು ಸ್ಪಷ್ಟವಾಗಿ ಅರಿವಿಗೆ ಬರುವ ಅಂಶವಾಗಿದೆ. ಮನದ ಮೂಲೆ ಮೂಲೆಯಲ್ಲಡಗಿರುವ ಕಸಕಲ್ಮಷವೆಲ್ಲವನ್ನೂ ಗುಡಿಸಿ, ಸ್ವಚ್ಛಗೊಳಿಸಿ ನಿರ್ಮಲಾಂತಃಕರಣದಿಂದ, ಸದ್ವಿಚಾರಪರತೆಯಿಂದ, ಚಿಂತನಶೀಲರಾಗಿ, ಇದಕ್ಕೆ ಮೂಲ ಕಾರಣವನ್ನು ಕುರಿತು ಯೋಚಿಸುವಾಗ ಹೊಳೆಯುವ ಅಂಶವೆಂದರೆ ಕೋಪವೇ ಎನ್ನುವುದು ಸುಸ್ಪಷ್ಟ, ಸುವೇದ್ಯ

ಜಗತ್ತು ಜನ್ಮ ತಳೆದಿರುವುದೇ ಆಸೆಯಿಂದ. ಜೀವಿ ಜೀವಿಸುವುದೇ ಈ ಆಸೆಯಿಂದ. ಆಸೆಯ ಪ್ರತಿರೂಪವೇ ಕೋಪ. ಮನುಷ್ಯನಿಗೆ ಯಾವಾಗ ಆಸೆ ಈಡೇರುವುದಿಲ್ಲವೋ ಆಗ ತನ್ನ ಆಸೆ ಈಡೇರುವುದಕ್ಕೆ ಅಡ್ಡಬಂದವರ ಮೇಲೆ ಕೋಪ ಉಂಟಾಗುತ್ತದೆ. ಮಾನಸ ಸರೋವರದಲ್ಲಿ ಏಳುವ ಆಸೆಯ ಅಲೆಯೇ ಕ್ರೋಧದ ರೂಪ ತಳೆಯುತ್ತದೆ. ಹಾಲು ಮೊಸರಾಗುವಂತೆ ನಮ್ಮ ಮನಸ್ಸಿನ ಆಸೆಗಳೇ ಕ್ರೋಧವಾಗಿ ರೂಪಾಂತರಗೊಳ್ಳುತ್ತವೆ.

ಚಂಡೀಪಾಠ ದುರ್ಗಾಸಪ್ತಶತಿಯಲ್ಲಿ "ಯಾದೇವೀ ಸರ್ವಭೂತೇಷು ಕ್ರೋಧರೂಪೇಣ ಸಂಸ್ಥಿತಾ, ನಮಸ್ತಸ್ಯೈ ನಮಸ್ತಸ್ಯೈ ನಮೋನಮಃ" ಎನ್ನುವ ಶ್ಲೋಕದ ಅರ್ಥ. "ಯಾವ ದೇವಿಯು ಎಲ್ಲ ಜೀವಿಗಳಲ್ಲಿ ಕ್ರೋಧ ರೂಪದಿಂದ ವಾಸಮಾಡುತ್ತಾಳೋ ಆ ದೇವಿಗೆ ನಾನು ಮತ್ತೆ ಮತ್ತೆ ನಮಸ್ಕಾರ ಮಾಡುತ್ತೇನೆ" ಎಂದು.

ಮನುಷ್ಯ ತನಗೆ ಒದಗಿದ ಅಥವಾ ಒದಗಿದೆ ಎಂದು ಊಹಿಸಿಕೊಂಡ ಯಾವುದೋ ಆಘಾತದ ಭಾವನೆಗೆ ಪ್ರತೀಕಾರ ಮಾಡಬೇಕೆನ್ನುವ ಆಸೆಯೇ ಕೋಪ. ಅದು ಜೀವಿಯ ಸೂಕ್ಷ್ಮ ಶರೀರದಿಂದ ಸ್ಥೂಲ ಶರೀರವನ್ನು ಪ್ರವೇಶಿಸಿ, ಮಡಕೆಯಿಂದ ನೀರು ಹೊರಕ್ಕೆ ಬರುವ ಹಾಗೆ ಎಲ್ಲೆಡೆಯೂ ಆವರಿಸಿಕೊಳ್ಳುತ್ತದೆ. ಶಾಖ ಸೀಸವನ್ನು ಕರಗಿಸುವ ಹಾಗೆ, ಶಾಖ ಮತ್ತು ಬಿಳಿಗಾರದಿಂದ ಚಿನ್ನವೂ ಕರಗುವ ಹಾಗೆ ಕಾಮ, ಕ್ರೋಧಗಳು ಜೀವಿಯನ್ನು ಕರಗಿಸುತ್ತವೆ.

ಎಲ್ಲ ದುರ್ಗುಣಗಳಿಗೂ, ದುಷ್ಕಾರ್ಯಗಳಿಗೂ ಕೋಪವೇ ಮೂಲ. ಮನುಷ್ಯ ಕೋಪಕ್ಕೆ ವಶನಾದನೆಂದರೆ ಅವನ ಬುದ್ಧಿ ನಾಶವಾಗಿ ಅವನು ಮಾಡಬಾರದ ಪಾಪವೆಲ್ಲವನ್ನೂ ಮಾಡುತ್ತಾನೆ. ಕೋಪವು ಜಿಗುಪ್ಸೆಯಿಂದ ಮೊದಲಾಗಿ, ಸಿಟ್ಟಾಗಿ ಮುಂದುವರೆದು, ಸಿಟ್ಟು ಸೆಡವುಗಳಾಗಿ ವಿವಿಧ ಸ್ಥಿತಿಗಳನ್ನು ಪ್ರಾಪ್ತ ಮಾಡಿಕೊಂಡು ಕೊನೆಗೆ ಸೇಡು, ಹಿಂಸೆ, ಪ್ರತೀಕಾರಗಳಲ್ಲಿ ಮುಕ್ತಾಯವಾಗುತ್ತದೆ.

ಇದನ್ನೇ ಭಗವದ್ಗೀತೆಯಲ್ಲಿ---

ಧ್ಯಾಯತೋ ವಿಷಯಾನ್ ಪುಂಸಃ  
ಸಂಗಸ್ತೇಷೂಪ ಜಾಯತೇ  
ಸಂಗಾತ್ ಸಂಜಾಯತೇ ಕಾಮಃ  
ಕಾಮಾತ್ ಕ್ರೋಧೋಭಿ ಜಾಯತೇ  
ಕ್ರೋಧಾದ್ಭವತಿ ಸಂಮೋಹಃ  
ಸಮ್ಮೋಹಾತ್ ಸ್ಮೃತಿ ವಿಭ್ರಮಃ  
ಸ್ಮೃತಿ ಭ್ರಂಶಾತ್ ಬುದ್ಧಿ ನಾಶೋ  
ಬುದ್ಧಿ ನಾಶಾತ್ ಪ್ರಣಶ್ಯತಿ

--ಎಂದು ಕೃಷ್ಣ ಹೇಳಿರುವುದು.

ಕೋಪಗೊಂಡ ಮನುಷ್ಯ ಮಾನಸಿಕ ಒತ್ತಡಕ್ಕೆ ಒಳಗಾಗಿ, ಉದ್ವೇಗಗೊಂಡನೆಂದರೆ, ಕೊಲೆ ಮಾಡಲೂ ಸಹ ಹಿಂದೆ ಮುಂದೆ ನೋಡಲಾರ. ಆವೇಶದಿಂದ ಕೂಡಿದ ಕೇವಲ ಒಂದು ಬಿಸಿ ಮಾತು ಹೊಡೆದಾಟದಲ್ಲಿ ಮುಂದುವರೆದು ಕೊಲೆಯಲ್ಲಿ ಪರ್ಯವಸಾನವಾಗಬಹುದು.

ಸಾಧಾರಣ ವಿಷಯಗಳಿಗೆಲ್ಲಾ ವ್ಯಕ್ತಿ ರೇಗತೊಡಗಿದರೆ, ಅವನ ಮನಸ್ಸು ದುರ್ಬಲಗೊಂಡಿದೆ ಎಂದೇ ಅರ್ಥ. ಏಕೆಂದರೆ, ಸಿಟ್ಟು ಮನುಷ್ಯನ ನರಮಂಡಲವೆಲ್ಲವನ್ನೂ ದುರ್ಬಲಗೊಳಿಸುತ್ತದೆ. ಕೋಪವನ್ನು ನಿವಾರಿಸಿಕೊಂಡ ಹಾಗೆಲ್ಲಾ ಮಾನಸಿಕ ಶಕ್ತಿ ಹೆಚ್ಚುತ್ತಾ ಹೋಗುತ್ತದೆ. ವಿದ್ಯುಚ್ಛಕ್ತಿಯಿಂದ ಬೆಳಕು ಮತ್ತು ಶಾಖ ಹುಟ್ಟುವ ಹಾಗೆ, ಸ್ಥಿಮಿತದಲ್ಲಿರಿಸಿಕೊಂಡ ಕೋಪದಿಂದ ಓಜಶ್ಶಕ್ತಿ ಹುಟ್ಟಿ ಅದು ಪ್ರಚಂಡ ಆಧ್ಯಾತ್ಮಿಕ ಶಕ್ತಿಯಾಗಿ ಮಾರ್ಪಾಡಾಗುತ್ತದೆ.

ಆದ್ದರಿಂದ ಕೋಪದ ಮೂಲ ಕಾರಣವಾದ ಅಹಂಕಾರವನ್ನು ಸರಿಯಾದ ವಿವೇಚನೆಯಿಂದ ಕೂಡಿದ ವಿಚಾರದಿಂದ ಹತ್ತಿಕ್ಕಬೇಕು. ಪ್ರೀತಿ, ಕರುಣೆ, ಅಂತಃಕರಣವೇ ಮೊದಲಾದ ಮಾನವೀಯ ಮೌಲ್ಯಗಳನ್ನು ಹೆಚ್ಚಿಸಿಕೊಳ್ಳಬೇಕು. ಕೋಪ ಬಂದ ಕೂಡಲೇ ಆ ಸ್ಥಳವನ್ನು ಬಿಟ್ಟು ದೂರ ಹೋಗಿ, ಸ್ವಲ್ಪ ವೇಗವಾಗಿ ನಡೆದು, ಸ್ವಲ್ಪ ತಣ್ಣೀರನ್ನು ಕುಡಿಯಬೇಕು.

ಸಾಕ್ರಟೀಸನು ತನ್ನ ಹೆಂಡತಿಯ ಬಯ್ಗುಳಿಂದ ಪಾರಾಗಲು ಅನುಸರಿಸುತ್ತಿದ್ದ ಮಾರ್ಗ ಇದೇ.

ಪ್ರಯತ್ನಪೂರ್ವಕವಾಗಿ ಈ ರೀತಿಯಲ್ಲಿ ಕೋಪವನ್ನು ಉಪಶಮನಗೊಳಿಸುವುದರಿಂದ ನಮ್ಮನ್ನು ನಾವೇ ಗೆದ್ದಂತಾಗುತ್ತದೆ. ನಮ್ಮನ್ನು ನಾವೇ ಗೆದ್ದೆವೆಂದರೆ ಇಡೀ ವಿಶ್ವವನ್ನೇ ನಾವು ಜಯಿಸಿದೆವೆಂದೇ ಅರ್ಥ.

ಹೀಗಾಗುವುದರಿಂದ ಕೌಟುಂಬಿಕವಾಗಿ, ಸಾಮಾಜಿಕವಾಗಿ, ರಾಷ್ಟ್ರೀಯವಾಗಿ, ವಿಶ್ವತೋಮುಖವಾಗಿ, ನಾವು ಶಾಂತಿಯನ್ನು ಸ್ಥಾಪಿಸಲು, ಅಶಾಂತಿಯನ್ನು ದೂರೀಕರಿಸಲು ನಮ್ಮ ಹಿರಿಯ ಕಾಣಿಕೆಯನ್ನು ಈ ಜಗತ್ತಿಗೆ ನೀಡುವಲ್ಲಿ ಸಮರ್ಥರಾಗುತ್ತೇವೆ.

ಶಕ್ನೋತೀ ಹೈವ ಯಃ ಸೋಢುಂ  
ಪ್ರಾಕ್ಶರೀರ ವಿಮೋಕ್ಷಣಾತ್  
ಕಾಮ ಕ್ರೋಧೋದ್ಭವಂ ವೇಗಂ  
ಸ ಯುಕ್ತಃ ಸ ಸುಖೀ ನರಃ  
ಕಾಮ ಕ್ರೋಧ ವಿಯುಕ್ತಾನಾಮ್  
ಯತೀನಾಂ ಯತ ಚೇತಸಾಮ್  
ಅಭಿತೋ ಬ್ರಹ್ಮನಿರ್ವಾಣಮ್  
ವರ್ತತೇ ವಿಧಿತಾತ್ಮನಾಮ್

--ಈ ಜಗತ್ತಿನಲ್ಲಿ ಬದುಕಿರುವಾಗಲೇ, ಈ ದೇಹವನ್ನು ಬಿಡುವುದಕ್ಕಿಂತ ಮೊದಲೇ, ಆಸೆ ಮತ್ತು ಕ್ರೋಧವನ್ನು ಗೆಲ್ಲುವವ ಯೋಗಿಯಾಗುತ್ತಾನೆ. ಅವನು ಪುಣ್ಯವಂತ. ಆಸೆ ಮತ್ತು ಕ್ರೋಧದಿಂದ ಯಾರು ದೂರವಾಗಿದ್ದಾರೋ, ತಮ್ಮ ಮನಸ್ಸನ್ನು ಗೆದ್ದು ತಮ್ಮನ್ನು ತಾವು ಯಾರು ಅರಿತಿರುವರೋ, ಅಂತಹವರು ಭಗವಂತನಿಗೆ ಅತ್ಯಂತ ಸಮೀಪರಾಗಿರುತ್ತಾರೆ --ಎಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಸಾರಿದ್ದಾನೆ.

ಪ್ರತಿಯೊಬ್ಬ ವ್ಯಕ್ತಿಯೂ ವೈಯುಕ್ತಿಕ ನೆಲೆಯಲ್ಲಿ ಸಮಾಜದ ಬಗ್ಗೆ, ಜಗತ್ತಿನ ಬಗ್ಗೆ, ಮಾನವೀಯ ಮೌಲ್ಯಗಳನ್ನು ನೆಲೆಗೊಳಿಸುವಲ್ಲಿ ಈ ರೀತಿ ಚಿಂತನಶೀಲ ಪ್ರಯತ್ನ ಮಾಡಿ, ಯಶಸ್ವಿಯಾಗುತ್ತಾ ಮುನ್ನಡೆದಾಗ, ಜಗತ್ತಿನ ಎಲ್ಲ ದ್ವೇಷ, ಪ್ರತೀಕಾರ, ಹಿಂಸಾ ಮನೋಭಾವ, ಮರೆಯಾಗುತ್ತಾ ಅಸತ್ತಿನಿಂದ ಸತ್ತಿನೆಡೆಗೆ, ತಮಸ್ಸಿನಿಂದ ಜ್ಯೋತಿಯೆಡೆಗೆ, ಅಶಾಂತಿಯಿಂದ ಶಾಂತಿಯೆಡೆಗೆ ಧಾವಿಸಲು ಸಹಕಾರಿಯಾಗಿ, ಸುಖೀ ಸಮಾಜ ನಿರ್ಮಾಣವಾಗುವಲ್ಲಿ, ಸುಮಧುರ ಬಾಂಧವ್ಯ ಬೆಳೆಸುವಲ್ಲಿ ಸಹಕಾರಿಯಾಗುವುದು ಸತ್ಯ.



# ಚರಮಶ್ಲೋಕತ್ರಯ

---ಕಂದಾಡೈ ಕೇಶವನ್.

ಶ್ರೀಮನ್ನಾರಾಯಣನು ನಮ್ಮ ಕರ್ಮಭೂಮಿಯಲ್ಲಿ ಅಧರ್ಮವು ಹೆಚ್ಚಾದಾಗ ಧರ್ಮಸ್ಥಾಪನೆ ಮಾಡಲು ತಾನೇ ಅವತಾರಮಾಡಿ ಧರ್ಮ ಸಂದೇಶವನ್ನು ನೀಡುವಾಗ ಉತ್ಕೃಷ್ಟವಾದ ಧರ್ಮವು ಯಾವುದು? ಮನುಷ್ಯನು ಸುಲಭವಾಗಿ ಮೋಕ್ಷವನ್ನು ಹೊಂದಲು ಸುಲಭೋಪಾಯ ಯಾವುದು? ಎಂಬುದಾಗಿ ತಿಳಿಸುತ್ತಾನೆ. ಎಲ್ಲಾ ಅವತಾರಗಳಲ್ಲೂ ಪರಮಾತ್ಮನು ತನ್ನ ಭಕ್ತರಿಗೆ ಮಾಡುವ ಉಪದೇಶ ಒಂದೇ. ಅದು ಶರಣಾಗತಿ ತತ್ವ. ಪರಮ ವಿಶ್ವಾಸದಿಂದ ಭಗವಂತನಲ್ಲಿ ನಮ್ಮನ್ನೂ ನಮ್ಮ ರಕ್ಷಣೆಯ ಭಾವವನ್ನೂ ಒಪ್ಪಿಸುವುದೇ ಶರಣಾಗತಿಯ ಅಂತರಾರ್ಥ. ಭಕ್ತಿಯೋಗಕ್ಕೆ ಕರ್ಮ ಜ್ಞಾನಗಳ ನೆರವು ಬೇಕು. ಭಕ್ತಿಗಿಂತ ಮುಂದಿನ ಹೆಜ್ಜೆ ಪ್ರಪತ್ತಿ. ಇಲ್ಲಿ ತನಗೂ ಈಶ್ವರನಿಗೂ ಇರುವ ಸಂಬಂಧಜ್ಞಾನ, ಮಹಾವಿಶ್ವಾಸ ಮತ್ತು ಕಾರ್ಪಣ್ಯ ಮಾತ್ರ ಇದ್ದರೆ ಸಾಕು. ಶರಣಾಗತಿ ದೇವರಲ್ಲಿ ನಾವು ಮಾಡುವ ಸಂಪೂರ್ಣವಾದ ನ್ಯಾಸ. ಸದಾ ಭಗವಂತನು ತನ್ನನ್ನು ಪೊರೆಯಬೇಕೆಂಬ ನೈಚ್ಯಾನುಸಂಧಾನ. ಈ ರಹಸ್ಯವನ್ನೆ ಶ್ರಿಯಃಪತಿಯು ಮೊದಲನೆಯದಾಗಿ ಭೂದೇವಿಗೆ ವರಾಹ ಪುರಾಣದಲ್ಲಿ ಉಪದೇಶ ಮಾಡಿದನು. ಆ ಚರಮ ಶ್ಲೋಕವನ್ನೇ ನಾವು ಪ್ರತಿನಿತ್ಯವೂ ಗುರುಪರಂಪರೆಯನ್ನು ಅನುಸಂಧಾನಮಾಡುವಾಗ ಜಪಿಸುತ್ತೇವೆ.

## ಶ್ರೀ ವರಾಹ ಚರಮಶ್ಲೋಕ

ಸ್ಥಿತೇ ಮನಸಿ ಸುಸ್ವಸ್ಥೇ
ಶರೀರೇ ಸತಿ ಯೋನರಃ
ಧಾತು ಸಾಮ್ಯೇ ಸ್ಥಿತೇ ಸ್ಮರ್ತಾ
ವಿಶ್ವರೂಪಂ ಚ ಮಾಮಜಮ್
ತತಸ್ತಂ ಮ್ರಿಯಮಾಣಸ್ತು
ಕಾಷ್ಠಪಾಷಾಣ ಸನ್ನಿಭಮ್
ಅಹಂ ಸ್ಮರಾಮಿ ಮದ್ಭಕ್ತಂ
ನಯಾಮಿ ಪರಮಾಂ ಗತಿಂ

ನಿರ್ಮಲವಾದ ನಿಶ್ಚಲವಾದ ಮನಸ್ಸು ಇರುವಾಗ ರೋಗಗಳಿಲ್ಲದೆ ವಾತಪಿತ್ತ ಶ್ಲೇಷ್ಮಗಳು ಸಮವಾಗಿದ್ದು ಆರೋಗ್ಯವಾಗಿರುವ ಯಾವ ಮನುಷ್ಯನು ವಿಶ್ವರೂಪಿಯಾದ ನನ್ನನ್ನು ಸ್ಮರಣೆ ಮಾಡಿದ ಮಾತ್ರಕ್ಕೆ ಆತನ ಅವಸಾನಕಾಲದಲ್ಲಿ ಅಚೇತನನಾಗಿದ್ದರೂ ನನ್ನ ಸ್ಮರಣೆ ಮಾಡಲು ಅಸಕ್ತನಾಗಿದ್ದರೂ ಅಂತಹ ಭಗವದ್ ಭಕ್ತನನ್ನು ನಾನೇ ಸ್ಮರಿಸುತ್ತಾ ಪರಮ ಮೋಕ್ಷಕ್ಕೆ ಕೊಂಡೊಯ್ಯುವೆ --ಎಂಬುವುದಾಗಿ ವಾಗ್ದಾನ ಮಾಡಿದ್ದಾನೆ. ಚರಮ ಶ್ಲೋಕವೆಂದರೆ ಪರಮಾತ್ಮನು ಸರ್ವೋತ್ಕೃಷ್ಟವಾದ ಮೋಕ್ಷ ಸಾಧನದ ಉಪಾಯವನ್ನು ಬೋಧಿಸಿದ, ಉಪಾನಕ್ಕೆ ಯೋಗ್ಯವಾದ ಅಂತಿಮ ಉಪಾಯವೂ ಕೂಡ. ಒಮ್ಮೆ ಪರಮಾತ್ಮನಲ್ಲಿ ಶರಣಾಗತಿಯಾದರೆ ಅಂತಿಮ ಕಾಲದಲ್ಲಿ ಮನುಷ್ಯ ಯಾವ ಅವಸ್ಥೆಯಲ್ಲಿದ್ದರೂ ಅಂತಹ ಭಕ್ತನನ್ನು ರಕ್ಷಿಸುವ ಹೊಣೆ -- ಭಾರ ಆ ಭಗವಂತನದು. ಇದು ಶರಣಾಗತಿಯ ಸ್ವರೂಪದ ಈ ಚರಮ ಶ್ಲೋಕದ ಗೂಢಾರ್ಥ.

## ರಾಮಾಯಣದ ಚರಮಶ್ಲೋಕ

ಲಂಕೆಯಲ್ಲಿ ವಿಭೀಷಣನನು ರಾವಣನಿಗೆ ಸೀತೆಯನ್ನು ರಾಮನಿಗೆ ಒಪ್ಪಿಸುವುದು ಸೂಕ್ತ ಎಂಬುವುದಾಗಿ ಉಪದೇಶ ಮಾಡಿದ. ರಾವಣನು ವಿಭೀಷಣನನ್ನು ದೂಷಿಸಿ ತನ್ನನ್ನು ಬಿಟ್ಟುಹೋಗೆಂದು ಮೂದಲಿಸಿದಾಗ ವಿಭೀಷಣನು ಶ್ರೀರಾಮನನ್ನು ಶರಣು ಹೋಗುವುದೇ ಶ್ರೇಯಸ್ಕರವೆಂದು ನಿಶ್ಚಯಿಸಿ ತನ್ನ ನಾಲ್ಕು ಮಂತ್ರಿಗಳೊಡನೆ ಹೊರಟು ರಾಮನು ಇದ್ದ ಕಡೆ ಬಂದು 'ಸರ್ವಲೋಕ ಶರಣ್ಯಾಯ ರಾಘವಾಯ ಮಹಾತ್ಮನೇ' ಎಂಬ ಭಾವ ಭಕ್ತಿಯಿಂದ 'ನಿವೇದಯತ ಮಾಂ ಕ್ಷಿಪ್ರಂ ವಿಭೀಷಣ ಮುಪಸ್ಥಿತಂ' ಎಂಬುವುದಾಗಿ ರಾಮನಲ್ಲಿ ಮೊರೆಯಿಟ್ಟನು. ಆಗ ಅಲ್ಲಿ ಇದ್ದ ಸುಗ್ರೀವಾದಿ ಕಪಿಗಳು ಶತ್ರುವಿನ ಸಹೋದರನು ವಿಶ್ವಾಸಕ್ಕೆ ಅರ್ಹನಲ್ಲವೆಂದು ಹೇಳಿದರು. ಶ್ರೀರಾಮನು ಸುಗ್ರೀವ ಮೊದಲಾದವರಿಗೆ ತನ್ನ ಅಂತಿಮ ನಿರ್ಣಯವನ್ನು ಈ ಚರಮ ಶ್ಲೋಕದಿಂದ ತಿಳಿಸಿದ --

'ಸಕೃದೇವ ಪ್ರಪನ್ನಾಯ
ತವಾಸ್ಮೀತಿ ಚ ಯಾಚತೇ
ಅಭಯಂ ಸರ್ವಭೂತೇಭ್ಯೋ
ದದಾಮ್ಯೇತದ್ವ್ರತಂ ಮಮ'

ಒಂದೇ ಸಲ ನಾನು ನಿನ್ನವನು ಎಂಬುವುದಾಗಿ ಶರಣಾಗತನಾದರೆ ಅಂತಹ ಬೇಡುವವನಿಗೆ ಎಲ್ಲಾ ಸ್ಥಾವರ ಜಂಗಮ ಸಮಸ್ತ ಪ್ರಾಣಿಗಳಿಗೂ ಅಭಯವನ್ನು ಕೊಡುವೆ. ಇದೇ ನನ್ನ ವ್ರತ ಎಂಬುವುದಾಗಿ ಶ್ರೀರಾಮನು ಘೋಷಿಸಿ ಪ್ರತಿಜ್ಞೆಮಾಡಿದ. ರಾಮನ ಈ ಮಾತಿಗೆ ಎರಡಿಲ್ಲ. 'ರಾಮೋದ್ವಿರ್ನಾಭಿಭಾಷತೇ' ಭಕ್ತನು ಭಗವಂತನೇ ರಕ್ಷಕನೆಂದು ಭಾವಿಸಿ ಶರಣಾಗತನಾಗಬೇಕು ಸ್ವಾಮಿ ಆತನ ಯೋಗಕ್ಷೇಮವನ್ನು ಭರಿಸಬಲ್ಲ.

## ಗೀತೆಯ ಚರಮ ಶ್ಲೋಕ

ಕುರುಕ್ಷೇತ್ರದಲ್ಲಿ ಪಾಂಡವರಿಗೂ ಕೌರವರಿಗೂ ಯುದ್ಧ ನಡೆಯುವ ಸಮಯ ಯುದ್ಧದಲ್ಲಿ ನಿಂತ ಅರ್ಜುನನು ತನ್ನ ಬಂಧುವರ್ಗದವರನ್ನು ಕಂಡು ಅವರನ್ನು ಕೊಂದು ತಾನು ಸುಖವನ್ನು ಪಡೆಯುವ ಆಸೆಯಿಲ್ಲವೆಂದು ನಿರ್ವೇದದಿಂದ ನುಡಿದಾಗ ಸ್ವಾಮಿ ಶ್ರೀಕೃಷ್ಣನು ಗೀತೆಯನ್ನು ೧೮ ಅಧ್ಯಾಯಗಳಲ್ಲಿ ಬೋಧಿಸಿ, ಉತ್ಕೃಷ್ಟವಾದ ಪರಮಪವಿತ್ರವಾದ ಶರಣಾಗತಿ ತತ್ವದ ಚರಮ ಶ್ಲೋಕವನ್ನು ಉಪದೇಶಮಾಡಿದ. ಅದೇ ಭಗವದ್ಗೀತೆಯ--

ಸರ್ವಧರ್ಮಾನ್ ಪರಿತ್ಯಜ್ಯ
ಮಾಮೇಕಂ ಶರಣಂ ವ್ರಜ
ಅಹಂ ತ್ವಾ ಸರ್ವ ಪಾಪೇಭ್ಯೋ
ಮೋಕ್ಷಯಿಷ್ಯಾಮಿ ಮಾಶುಚಃ

-- ಸಮಸ್ತ ಧರ್ಮಗಳನ್ನು ಬಿಟ್ಟು ನನ್ನನ್ನೇ ಆಶ್ರಯಿಸು, ನಾನು ನಿನ್ನನ್ನು ಪಾಪಗಳಿಂದ ಬಿಡುಗಡೆ ಮಾಡಿ ಮೋಕ್ಷವನ್ನು ಕೊಡುವೆ ಶೋಕಿಸಬೇಡ ಎಂಬುವುದಾಗಿ ಕೃಷ್ಣನ ಕಡೆಯ ಮಾತು. ಪವಿತ್ರವಾದ, ಶ್ರೇಷ್ಠವಾದ ಪ್ರಪತ್ತಿ ಶರಣಾಗತಿ ತತ್ವಗಳ ಪರಮ ರಹಸ್ಯ ಈ ಮಂತ್ರ. ಭಗವಂತನ ಪಾದಗಳೇ ನಮಗೆ ಪ್ರಾಪ್ಯವಸ್ತು. ಅವನಲ್ಲಿ ಅನನ್ಯ ಶರಣ್ಯತ್ವವನ್ನು ಹೊಂದುವ ಆತ್ಮನಿಕ್ಷೇಪ. ಪರಮಾತ್ಮನನ್ನು ಪಡೆಯಬೇಕೆಂಬ ಕಾತುರ ಪ್ರೇಮ ಕಾರ್ಪಣ್ಯ ಅತಿಮುಖ್ಯ. ತನುಮನ ಚಿತ್ತಗಳನ್ನು ಭಗವಂತನಿಗೆ ಅರ್ಪಣೆ ಮಾಡುವ ಬುದ್ಧಿ ಬಂದಾಗ ಭಕ್ತಿ ಜ್ಞಾನ ವೈರಾಗ್ಯಗಳು ತಾವೇ ಮನುಷ್ಯನಲ್ಲಿ ಉದ್ಭವವಾಗಿ ಈಶ್ವರನ ಕಡೆ ನಮ್ಮನ್ನು ಕೊಂಡೊಯ್ಯುತ್ತವೆ. ಪರಮ ಕಾರಣಿಕವಾದ ಪೆರಿಯ ವಾಚ್ಚಾನ್ ಪಿಳ್ಳೈರವರು ಬರೆದ ಚರಮ ಶ್ಲೋಕ ತ್ರಯಗಳ ವ್ಯಾಖ್ಯಾನವು ತಮಿಳಿನಲ್ಲಿ ಪ್ರಸಿದ್ಧವಾಗಿವೆ. ಇಲ್ಲಿ ಅವರು ಹೇಳುವ ಶ್ರುತಿ ಸ್ಮೃತಿ ಇತಿಹಾಸ ಪುರಾಣಗಳ ಪ್ರಮಾಣಗಳ ಶ್ಲೋಕಗಳು, ದಿವ್ಯ ಪ್ರಬಂಧಗಳ ಪಾಶುರಗಳ ಪದ ಪಂಕ್ತಿಗಳು ಈ ಮೂರು ಚರಮ ಶ್ಲೋಕಗಳ ಹೆಗ್ಗಳಿಕೆಯನ್ನು ಇಮ್ಮಡಿ ಮಾಡಿವೆ. ಅವುಗಳ ಮೂಲ ಪಾಠವನ್ನೇ ಕೇಳಿ, ಓದಿ, ಕಾಲಕ್ಷೇಪ ಮಾಡಿದರೆ ಮಾತ್ರ ಅದರ ಸೊಗಸು ಇಂಪು ಸ್ವಾರಸ್ಯ ರಹಸ್ಯಾರ್ಥಗಳ ತಿರುಳು ನಮಗೆ ತಿಳಿಯುವುದು. ಬರೀ ಅರ್ಥ ಓದಿ ತಿಳಿದರೆ ಸಾಲದು. ಅದರ ಅಂತರಾರ್ಥಗಳನ್ನು ಆಚಾರ್ಯರು ತಮ್ಮ ವ್ಯಾಖ್ಯಾನಗಳಲ್ಲಿ ವಿವರಿಸಿರುವುದನ್ನು ಮನಗೊಂಡರೆ ಮಾತ್ರ ಜೀವನ ಸಾರ್ಥಕ.

❄❄❄❄❄❄

# ತಿರುಮಲೆಯಲ್ಲಿ ವಸತಿ

* ತಿರುಮಲೆಯಲ್ಲಿ ಯಾತ್ರಿಕರಿಗಾಗಿ ಉಚಿತವಾಗಿ ಸತ್ರಗಳಲ್ಲಿ ವಸತಿಯುಂಟು. ಇಲ್ಲಿನ ಕೋಣೆಗಳಲ್ಲಿ ವಿದ್ಯುತ್, ನೀರು ಸಹ ಉಚಿತವೇ. ಆದರೆ ಇವುಗಳಲ್ಲಿ ಮಂಚ, ಹಾಸಿಗೆ ಮುಂತಾದ ಅನುಕೂಲಗಳು ಇಲ್ಲ. ಇವುಗಳಲ್ಲಿ ವಸತಿ ಬೇಕಾದವರು ತಿರುಮಲೆಯ ಬಸ್ ನಿಲ್ಲುವ ಸ್ಥಳದ ಕೇಂದ್ರ ವಿಚಾರಣಾ ಕಚೇರಿಯಲ್ಲಿ ಕೇಳಿ ಪಡೆಯಬಹುದು.

* ಮಂಚ ಹಾಸಿಗೆ ಮತ್ತಿತರ ಸೌಕರ್ಯಗಳಿರುವ ಕೋಣೆಗಳು ಪಡೆಯಲು ತಿರುಮಲೆಯ ಅಸಿಸ್ಟೆಂಟ್ ಎಕ್ಸಿಕ್ಯುಟಿವ್ ಆಫೀಸರ್ ಅವರನ್ನು ವಿಚಾರಿಸಬೇಕು. ಅಥವಾ ಕನಿಷ್ಠ 30 ದಿನಗಳ ಮುಂಚೆ ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ರೂ. 100-00 ಗಳ ಡಿ. ಡಿ.ಯನ್ನು ತೆಗೆದುಕೊಂಡು, ತಮಗೆ ವಸತಿ ಬೇಕಾದ ದಿನಾಂಕ, ತಿರುಮಲೆಗೆ ಎಷ್ಟು ಮಂದಿ ಬರುತ್ತಿರುವಿರಿ ಎಂಬ ವಿವರಗಳೊಡನೆ ಡಿ. ಡಿ.ಯನ್ನೂ, ವಿವರ ಪತ್ರವನ್ನೂ ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ (ರಿಸೆಪ್ಷನ್-1) ತಿರುಮಲೆ 517 504 ಇವರಿಗೆ ಕಳುಹಿಸಬೇಕು.

**ಬಾಡಿಗೆ (ಸೇವಾಶುಲ್ಕ) ಸಹಿತ ಕೋಣೆಗಳ ವಿವರ ಹೀಗಿದೆ.**

| | ದಿನಕ್ಕೆ ಬಾಡಿಗೆ |
|---|---|
| 1. ಹಿಲ್‌ವ್ಯೂ (ಅರ್ಧಕಾಟೇಜು) ಶಂಕುಮಿಟ್ಟ | |
| ಶೇಷಾದ್ರಿನಗರ, ಅಂಜನಾದ್ರಿನಗರ, ಗರುಡಾದ್ರಿನಗರ | ರೂ. 15/- |
| ಎಚ್.ವಿ.ಡಿ.ಸಿ. ಪ್ರತಿಕಾಟೇಜು (ಗೀಜರ್‌ನೊಂದಿಗೆ) | ರೂ. 50/- |
| ಎಚ್.ವಿ.ಸಿ. ಪ್ರತಿಕಾಟೇಜು (ಗೀಜರ್ ಸಹಿತ) ದೊಡ್ಡವು | ರೂ. 30/- |
| ಎಚ್.ವಿ.ಸಿ. ಪ್ರತಿಕಾಟೇಜು (ಗೀಜರ್ ಸಹಿತ) ಚಿಕ್ಕವು | ರೂ. 25/- |
| (ಮೊದಲೇ ರಿಸರ್ವ್ ಮಾಡಿಸಬಹುದು) | |
| 2. ಮಂಗಳಬಾವಿ ಕಾಟೇಜುಗಳು ಟಿ.ಬಿ.ಸಿ. 3 ಸಾಲು ಒಂಬಾಗ | ರೂ. 50/- |
| ಟಿ.ಬಿ. ಕಾಟೇಜು ಗೀಜರ್‌ಸಹಿತ A, B. (ಪ್ರತಿಯೊಂದು) | ರೂ. 50/- |
| ಟಿ.ಬಿ. ಕಾಟೇಜು ಗೀಜರ್‌ಸಹಿತ C, D. (ಪ್ರತಿಯೊಂದು) | ರೂ. 60/- |
| ವಿ. ವಿ. ಸಿ. | ರೂ. 150/- |
| ಎಂ.ಬಿ.ಸಿ. ಗೀಜರ್ ಸಹಿತ (ಪ್ರತಿಯೊಂದು) | ರೂ. 50/- |
| ಟಿ.ಬಿ.ಸಿ. ಗೀಜರ್ ಸಹಿತ (ಪ್ರತಿಯೊಂದು) | ರೂ. 30/- |
| ಎ.ಟಿ.ಸಿ. (ಪ್ರತಿಯೊಂದು) | ರೂ. 30/- |
| ಎ.ಟಿ.ಸಿ. ಸೂಟ್‌ಗಳು | ರೂ. 15/- |
| 3. ಎಸ್.ವಿ.ಅತಿಥಿಗೃಹ, ಎಸ್.ವಿ.ಜಿ.ಎಚ್.-ಪ್ರತಿಸೂಟ್ | ರೂ. 100/- |
| ಆರ್. ಬಿ. ಜಿ. ಎಚ್; ಎಸ್. ಎನ್. ಜಿ. ಎಚ್. -- | ರೂ. 100/- |
| ಮೂಲೆ ಕೋಣೆಗಳು -- | ರೂ. 150/- |
| (ರಿಸರ್ವೇಷನ್ ಪದ್ಧತಿಯಿಲ್ಲ) | |
| 4. ಟ್ರಾವೆಲರ್ಸ್ ಬಂಗ್ಲೆ (ಒಳಗಿನ ಕಾಟೇಜು) | ರೂ. 150/- |
| ನಾರಾಯಣಗಿರಿ ಕಾಟೇಜುಗಳು | ರೂ. 350/- |
| ಎನ್.ಜಿ.ಸಿ. -- 5, 12,13, | ರೂ. 500/- |
| ಎಚ್. ಆರ್. ಜಿ. ಕಾಟೇಜು ಪ್ರತಿಭಾಗ -- ಎ.ಸಿ. | ರೂ. 400/- |
| 5. ಮೋದಿಭವನ, ಪ್ರತಿಸೂಟ್ -- ಎ.ಸಿ. | ರೂ. 250/- |
| ಶ್ರೀ ನಿಕೇತನ ಅತಿಥಿಗೃಹ, ಪ್ರತಿಸೂಟ್ -- ಎ.ಸಿ. | ರೂ. 500/- |
| ಇಂದಿರಾ ಅತಿಥಿಗೃಹ, ಪ್ರತಿಸೂಟ್ -- ಎ.ಸಿ. | ರೂ. 500/- |
| ಬಾಲಕುಟೀರ, ಪ್ರತಿಸೂಟ್ -- ಎ.ಸಿ. | ರೂ. 250/- |
| ಶ್ರೀನಿವಾಸ ನಿಲಯ, ಪ್ರತಿಸೂಟ್ -- ಎ.ಸಿ. | ರೂ. 500/- |
| ಶ್ರೀಲಕ್ಷ್ಮಿನಿಲಯಂ, ಪ್ರತಿಸೂಟ್ -- ಎ.ಸಿ. | ರೂ. 500/- |
| ಗೋದಾವರಿಸದನ್, ಪ್ರತಿಸೂಟ್ -- ಎ.ಸಿ. | ರೂ. 500/- |
| ಗಾಂಬಲ್ ಅತಿಥಿಗೃಹ | ರೂ. 250/- |
| ಪದ್ಮಾವತೀ ಅತಿಥಿಗೃಹ (ಮಾಸ್ಟರ್‌ಸೂಟ್) | ರೂ. 1500/- |
| ಪದ್ಮಾವತೀ ಅತಿಥಿಗೃಹ ಇತರ -- ಪ್ರತಿಸೂಟ್ | ರೂ. 500/- |
| ವಿದ್ಯಾಸದನ್ ಮಾಸ್ಟರ್ ಸೂಟ್ | ರೂ. 1500/- |
| ವಿದ್ಯಾಸದನ್ ಇತರ -- ಪ್ರತಿಸೂಟ್ | ರೂ. 500/- |
| ಗೋಕುಲಂ ಅತಿಥಿಗೃಹ, ಪ್ರತಿಸೂಟ್ -- ಎ.ಸಿ. | ರೂ. 1000/- |
| ರಿಸರ್ವೇಷನ್ ಇಲ್ಲ. ಅವಕಾಶವಿದ್ದಂತೆ ನೀಡಲಾಗುವುದು. | |
| 6. ಮದುವೆ ಮಂಟಪಗಳು -- ಬೆಳಗ್ಗೆ 8 ರಿಂದ 24 ಗಂಟೆ. | |
| ಶಂಕುಮಿಟ್ಟ ಕಾಟೇಜುಗಳು -- 272, 260, 266, 267, | ರೂ. 100/- |
| ಟಿ. ಬಿ. ಕಾಟೇಜುಗಳು 71, ಮೂರನೇಸಾಲು 136, 152 | ರೂ. 100/- |
| ರೂಯಾಕಾಟೇಜು, ಗೋಗಿನೇನಿ ಕಾಟೇಜು, ಎ.ಟಿ.ಸಿ. 99 | ರೂ. 100/- |
| ಚಿದಂಬರಂ ಚೆಟ್ಟಿಯಾರ್ ಕಾಟೇಜು | ರೂ. 100/- |
| ಶ್ರೀ ಸೀತಾರಾಮ ಕಲ್ಯಾಣ ಮಂಟಪ | ರೂ. 1000/- |

* ದಿನವೆಂದರೆ ವಸತಿ ನೀಡಿದ ಹೊತ್ತಿನಿಂದ 24 ಗಂಟೆಗಳು.
* ಕೇಳಿದ ವಸತಿ ಇಲ್ಲದಿದ್ದಲ್ಲಿ ಬೇರೆ ವಸತಿ ನೀಡಿ, ಹೆಚ್ಚಿನ ಹಣವನ್ನು (ಇದ್ದರೆ) ಹಿಂದಿರುಗಿಸಲಾಗುತ್ತದೆ.
* ಒಂದು ದಿನಕ್ಕೆ ಮಾತ್ರವೇ ರಿಸರ್ವೇಷನ್. ಅಂದು ಬರದಿದ್ದಲ್ಲಿ ಮಿಸಲಾತಿ ರದ್ದಾಗಿ, ಹಣವನ್ನು ಹಿಂದಿರುಗಿಸುವುದೂ ಮತ್ತೊಂದು ದಿನಕ್ಕೆ ಹೊಂದಿಸುವುದೊ ಇಲ್ಲ.
* ಅವಧಿ ಮೀರಿದ ಮೇಲೂ ವಸತಿಯಲ್ಲಿಯೇ ಇದ್ದಲ್ಲಿ ಮೂರು ಪಾಲು ಹೆಚ್ಚಿನ ಹಣದ ದಂಡ ವಸೂಲು ಮಾಡಲಾಗುವುದು.
* ಇಲ್ಲಿ ಸೂಚಿಸಲಾಗಿರುವ ಸೇವಾಶುಲ್ಕಗಳು ಬದಲಾವಣೆ ಆಗಬಹುದು.

**ತಿರುಪತಿಯಲ್ಲಿ ವಸತಿ**

| | | |
|---|---|---|
| 1. | ಎಸ್. ವಿ. ಅತಿಥಿಗೃಹ -- ಒಂದು ಕೋಣೆ -- ದಿನಕ್ಕೆ | ರೂ. 100/- |
| 2. | ಅಲಿಪಿರಿ ಅತಿಥಿಗೃಹ -- ಒಂದು ಕೋಣೆ -- ದಿನಕ್ಕೆ | ರೂ. 75/- |
| 3. | ಮೊದಲ ಹೊಸಸತ್ರ --ಸಿಂಗಲ್ ರೂಂ -- | ರೂ. 50/- |
| | ಡಬಲ್ ರೂಂ -- | ರೂ. 100/- |
| | 4 ಹಾಸಿಗೆಯ ರೂಂ -- | ರೂ. 100/- |
| 4. | ಪದ್ಮಾವತೀ ಅತಿಥಿಗೃಹ (ಎ.ಸಿ.) | |
| | ಸಿಂಗಲ್ ರೂಂ -- 9, 10, | ರೂ. 100/- |
| | ಎರಡು ಹಾಸಿಗೆಯದು | ರೂ. 150/- |
| | ಎರಡು ಹಾಸಿಗೆ -- ಮೊಸಾಯಿಕ್ ರೂಂ (11,12,15,17) | ರೂ. 200/- |
| | ಎರಡು ಹಾಸಿಗೆ ಸೂಪರ್ ಮೊಸಾಯಿಕ್ ರೂಂ 16,18, | ರೂ. 250/- |

ಈ ದರಗಳು ಈಗ ಜಾರಿಯಲ್ಲಿವೆ.

ಅಥವಾ

# ತಿರುಚಾನೂರಿನಲ್ಲಿ ವೈಭವದ ಶ್ರೀಯಾಗ

ತಿರುಚಾನೂರಿನ ತೋಳಪ್ಪ ಗಾರ್ಡನ್ಸ್‌ನಲ್ಲಿ ಮಾರ್ಚ್ 13 ರಿಂದ 17 ರ ವರೆಗೆ ಐದು ದಿನಗಳ ಕಾಲ ತಿ.ತಿದೇ. ಧರ್ಮಪ್ರಚಾರ ಪರಿಷತ್ ಆಶ್ರಯದಲ್ಲಿ ಚತುರ್ವಿಂಶತಿ ಕುಂಡಾತ್ಮಕ ಶ್ರೀಯಾಗವು ಶ್ರೀ ಶ್ರೀ ಶ್ರೀ ತ್ರಿದಂಡಿ ಶ್ರೀಮನ್ನಾರಾಯಣ ಚಿನ್ನ ಜೀಯರ್ ಸ್ವಾಮಿಗಳವರ ಪರ್ಯವೇಕ್ಷಣೆಯಲ್ಲಿ ವೈಭವೋಪೇತವಾಗಿ ನಡೆದು ಮಂಗಳಕರವಾಗಿ ಸಂಪನ್ನವಾಯಿತು.

ವಿಶ್ವಶಾಂತಿ, ಸೌಹಾರ್ದಗಳ ಸಾಧನೆಯ ಉದ್ದೇಶದಿಂದ ನಡೆದ ಯಾಗದಲ್ಲಿ ಭಾರೀ ಸಂಖ್ಯೆಯ ಭಕ್ತರು ಪಾಲುಗೊಂಡಿದ್ದರು. ಮಾರ್ಚ್ 13 ರಂದು ಹಂಸವಾಹನದಲ್ಲಿ ಶ್ರೀ ಪದ್ಮಾವತೀ ಅಮ್ಮನವರು ಮೆರವಣಿಗೆಯಲ್ಲಿ ಯಾಗಶಾಲೆಗೆ ಆಗಮಿಸಿದ



ನಂತರ ಅಗ್ನಿಯ ಆವಾಹನೆಯಾಗಿ 24 ಹೋಮ ಕುಂಡಗಳಿಗೂ ಅಗ್ನಿಯನ್ನು ಹಂಚಿದ ಮೇಲೆ ಶ್ರೀಸೂಕ್ತ ಭೂಸೂಕ್ತಗಳ ಸಹಿತವಾಗಿ ಆಗಮ ಶಾಸ್ತ್ರ ರೀತ್ಯಾ ನಡೆದ ಯಜ್ಞದಲ್ಲಿ ವಿವಿಧ ಪ್ರಾಂತ್ಯಗಳಿಂದ ಬಂದ ವೈದಿಕರು ಋತ್ವಿಜರಾಗಿ ಪಾಲುಗೊಂಡರು. ಅಮ್ಮನವರು ತರುವಾಯದ ದಿನಗಳಲ್ಲಿ ಹನುಮಂತವಾಹನ, ಗರುಡವಾಹನ, ಗಜವಾಹನಗಳಲ್ಲಿ ಯಾಗಶಾಲೆಗೆ ಆಗಮಿಸುವಂತೆ ಏರ್ಪಾಡಾಗಿದ್ದಿತು. 16-3-95 ರಂದು ಸ್ನಪನ ತಿರುಮಂಜನ ಆದ ಮೇಲೆ ಶ್ರೀ ಪದ್ಮಾವತೀ ಕಲ್ಯಾಣವನ್ನು ಏರ್ಪಡಿಸಲಾಗಿದ್ದಿತು. ದಿನವೂ ಗೃಹಸ್ಥರಿಗಾಗಿ ಸಾಮೂಹಿಕ ಲಕ್ಷ್ಮೀಪೂಜೆಯ ಅವಕಾಶ ಕಲ್ಪಿಸಲಾಗಿದ್ದಿತು. ಯಾಗದಲ್ಲಿ ಯಜಮಾನರಾಗಿ ಭಾಗವಹಿಸಲು ಸಾರ್ವಜನಿಕರಿಗೆ ಸೌಲಭ್ಯ ಕಲ್ಪಿಸಲಾಗಿದ್ದಿತು. 17 ರಂದು ಅಮ್ಮನವರ ತಿರುನಕ್ಷತ್ರದಂದು ಯಾಗದ ಪೂರ್ಣಾಹುತಿ ನಡೆಯಿತು.

ಶ್ರೀಯಾಗ ಸಂದರ್ಶನಾಪೇಕ್ಷಿಯ ಯಾತ್ರಿಕರಿಗೆ ಯಾವುದೇ ಕೊರತೆಯೂ ಉಂಟಾಗದಂತೆ ತಿರುಪತಿಯಿಂದ ತಿರುಚಾನೂರಿಗೆ ಆಂಧ್ರಪ್ರದೇಶ ರಸ್ತೆ ಸಾರಿಗೆ ಸಂಸ್ಥೆಯ ಬಸ್‌ಗಳು ನಿರಂತರವಾಗಿ ಐದೂ ದಿನಗಳಲ್ಲಿಯೂ ಸಾವಿರಾರು ಯಾತ್ರಿಕರನ್ನು ಕೊಂಡೊಯ್ದವು. ಶ್ರೀಯಾಗದಲ್ಲಿ ಪಾಲುಗೊಳ್ಳುವ ಭಕ್ತರಿಗಾಗಿ ತಿರುಪತಿಯ ಮೂರನೇ ಸತ್ರದಲ್ಲಿ ವಸತಿ ಏರ್ಪಾಡು ಉಂಟಾಗಿದ್ದು ಭಕ್ತರು ಅಲ್ಲಿಂದಲೇ ಬಸ್ ಹತ್ತಿ ಯಾಗಸ್ಥಳಕ್ಕೆ ಬರುವ ಏರ್ಪಾಡು ಮಾಡಲಾಗಿದ್ದಿತು. ತಿರುಚಾನೂರಿನಲ್ಲಿ ವ್ಯಾಪಕವಾದ ಭೋಜನ ಸೌಲಭ್ಯವನ್ನು ಕಲ್ಪಿಸಲಾಗಿದ್ದಿತು. ಯಾತ್ರಿಕರ ಅವಸರಗಳಿಗೆ ತಕ್ಕಂತೆ ನೀರಿನ ವ್ಯವಸ್ಥೆ, ಶೌಚಗೃಹಗಳ ವ್ಯವಸ್ಥೆ, ಪರಿಸರ ಶುಭ್ರತೆಯ ವ್ಯವಸ್ಥೆ ಘನವಾಗಿ ನಡೆದು, ಅಲ್ಲಲ್ಲಿ ತಿ.ತಿ.ದೇ. ಉದ್ಯೋಗಿಗಳ, ವಿಕಾಸ ತರಂಗಿಣಿ ಸ್ವಯಂಸೇವಕರ ತಂಡಗಳನ್ನು ಮಾರ್ಗದರ್ಶನಕ್ಕಾಗಿ ಬಳಸಲಾಯಿತು. ಯಾತ್ರಿಕರ ವಸ್ತುಗಳನ್ನು ಇಡಲೂ, ಪಾದರಕ್ಷೆಗಳನ್ನು ಭದ್ರಪಡಿಸಲೂ ವ್ಯಾಪಕ ಏರ್ಪಾಡುಗಳಾಗಿದ್ದವು. ಧಾರ್ಮಿಕ ಸಾಹಿತ್ಯ ಪ್ರಸಾರಕ್ಕಾಗಿ ಪ್ರತ್ಯೇಕವಾದ ಮಾರಾಟ ಮಳಿಗೆಗಳನ್ನು ಏರ್ಪಾಡು ಮಾಡಲಾಗಿದ್ದಿತು. ತಿ.ತಿ.ದೇ. ಗ್ರಂಥ ಪ್ರದರ್ಶನ ವಿಕ್ರಯ ಶಾಲೆಯೂ ಏರ್ಪಾಡಾಗಿದ್ದು ಇಲ್ಲಿ ರಿಯಾಯಿತಿ ದರಗಳಲ್ಲಿ ಧಾರ್ಮಿಕ ಸಾಹಿತ್ಯದ ಮಾರಾಟ ನಡೆಯಿತು (ಒಟ್ಟು ಇಲ್ಲಿನ ಮಾರಾಟ 17 ಸಾವಿರ



ರೂಪಾಯಿಗೂ ಹೆಚ್ಚು). ವೈದ್ಯಕೀಯ ಕೇಂದ್ರವನ್ನೂ ಏರ್ಪಾಡುಮಾಡಲಾಗಿದ್ದಿತು. ಜೊತೆಗೇ ತಿ.ತಿ.ದೇ. ಆಯುರ್ವೇದ ಕಾಲೇಜಿನ ಔಷಧವಂಗಡಿಯೂ ತೆರೆದಿತ್ತು. ಯಾಗಮಂಟಪವನ್ನೂ ಸುತ್ತಲಿನ ಪರಿಸರವನ್ನೂ ಸುಂದರವಾಗಿ ಅಲಂಕರಿಸಿ, ವಿದ್ಯುತ್ತೋರಣ, ಮಾಲಿಕೆ, ಚಿತ್ರಗಳನ್ನೂ ಬಿಡಿಸಲಾಗಿದ್ದಿತು. ಅಮ್ಮನವರ ಉತ್ಸವ ವಿಗ್ರಹಕ್ಕಾಗಿ ಪ್ರತ್ಯೇಕ ಮಂಟಪ ನಿರ್ಮಾಣವಾಗಿದ್ದಿತು.





ಹನ್ನೆರಡರಂದು ಸಂಜೆ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶ್‌ಕುಮಾರ್ ಅವರ ನೇತೃತ್ವದಲ್ಲಿ ಅಮ್ಮನವರ ಪೂಜೆ ನಡೆದು, ಚಕ್ರತ್ತಾಳ್ವಾರರಿಗೆ ಪುಣ್ಯಾಹ ವಾಚನವಾಗಿ ವೇದಪಂಡಿತ ಶ್ರೀಚಕ್ರಪಾಣಿ ಭಟ್ಟರ್ ಅವರಿಗೆ ಸಂಕಲ್ಪದೀಕ್ಷೆಯಾಗಿ ಯಜ್ಞಮಂಟಪದಲ್ಲಿ ಅಂಕುರಾರ್ಪಣೆ ನಡೆಯಿತು.

ಹದಿಮೂರರಂದು ಹಂಸವಾಹನೆಯಾದ ಅಮ್ಮನವರು ಚಕ್ರತ್ತಾಳ್ವಾರರ ಪರಿರಕ್ಷೆಯಲ್ಲಿ ಯಾಗಶಾಲೆಗೆ ಬಿಜಯಮಾಡಿಸಿದರು. ನಂತರ ಅಗ್ನಿಮಥನ, ಗರುಡಧ್ವಜಾರೋಹಣ, ಯಜ್ಞ ಕಂಕಣಧಾರಣೆ ನಡೆಯಿತು. ದೇವಾದಾಯ ಇಲಾಖಾ ಕಮಿಷನರ್ ಶ್ರೀ ಸಿ. ಎಚ್. ವೆಂಕಟಪತಿರಾಜು ಮೊದಲಾದವರು ಕಂಕಣಸ್ವೀಕರಿಸಿದರು. ಶ್ರೀ ಶ್ರೀ ಚಿನ್ನಜೀಯರ್ ಅವರು ಸಾಮೂಹಿಕ ಲಕ್ಷ್ಮೀಪೂಜೆಯನ್ನು ನೆರವೇರಿಸಿಕೊಟ್ಟರು. ಶ್ರೀ ಭಾಷ್ಯಂ ಅಪ್ಪಲಾಚಾರ್ಯುಲು, ಶ್ರೀರಂಗಾಚಾರ್ಯುಲು, ಯಾಗ ಪ್ರಾಮುಖ್ಯತೆಯನ್ನು ವಿವರಿಸಿದರು. ವ್ಯಾಸಾಶ್ರಮದ ಶ್ರೀ ಶ್ರೀ ವಿದ್ಯಾಪ್ರಕಾಶಾನಂದಗಿರಿ ಸ್ವಾಮಿಗಳ ಮಂಗಳಾಶಾಸನದೊಡನೆ ಅಂದಿನ ಯಾಗ ಪೂರ್ಣಾಹುತಿ ಆಯಿತು. ಸಂಜೆ ಶ್ರೀ ಶ್ರೀ ಚಿನ್ನಜೀಯರ್ ಅವರು ವಿಷ್ಣು ಸಹಸ್ರ ನಾಮ ಪಾರಾಯಣ ಮಾಡಿಸಿದ ನಂತರ ಅಮ್ಮನವರು ಹಂಸವಾಹನೆಯಾಗಿ ಆಲಯಕ್ಕೆ ಹಿಂದಿರುಗಿದರು.

ಹದಿನಾಲ್ಕರಂದು ಅಮ್ಮನವರು ಹನುಮಂತ ವಾಹನದಲ್ಲಿ ಪುರಬೀದಿಗಳಲ್ಲಿ ಮೆರವಣಿಗೆಯಲ್ಲಿ ಬಂದು ಯಾಗಶಾಲೆಯಲ್ಲಿ ಉಪಸ್ಥಿತರಾದನಂತರ ಕಾರ್ಯಕ್ರಮಗಳು ಆರಂಭವಾದವು. ಯಾಗಶಾಲೆಯಲ್ಲಿ ಯಾಗ ನಡೆಯುತ್ತಿರುವಂತೆ ಪದ್ಮಾವತೀ ಅಮ್ಮನವರಿಗೆ ಹಾಗೂ ಚಕ್ರತ್ತಾಳ್ವಾರರಿಗೆ ತಿರುಮಂಜನ ನಡೆಯಿತು. ಕರ್ನಾಟಕದ ಶ್ರೀ ವರದರಾಜಭಟ್ಟರ್, ಶ್ರೀ ಬದರೀನಾರಾಯಣಭಟ್ಟರ್ ಈ ಅಭಿಷೇಕವನ್ನು ನೆರವೇರಿಸಿದರು. ಸಾಮೂಹಿಕ ಲಕ್ಷ್ಮೀ ಪೂಜೆಯನ್ನು ನೆರವೇರಿಸಿ ನೀಡಿದ ಶ್ರೀ ಶ್ರೀ ಚಿನ್ನಜಿಯರ್ ಅವರು ಅಮ್ಮನವರು ಪ್ರೇಮೈಕ ಮೂರ್ತಿಯೆಂದೂ ಆಕೆಯ ಅನುಗ್ರಹಕ್ಕಾಗಿಯೇ ಶ್ರೀಯಾಗ ನಡೆಯುತ್ತಿದೆಯೆಂದೂ ಅಪ್ಪಣೆಕೊಡಿಸಿದರು.

ಬುಧವಾರ ಗರುಡವಾಹನದಲ್ಲಿ ಅಮ್ಮನವರು ಯಾಗಶಾಲೆಗೆ ಆಗಮಿಸಿದರು. ನೂರಾರು ಮಂದಿ ಯಜಮಾನರುಗಳು ಕಂಕಣಧರಿಸಿ ಯಜ್ಞದಲ್ಲಿ ಭಾಗವಹಿಸಿದ್ದರು. ಪ್ರವಚನ ಮಂಟಪದಲ್ಲಿ ಪಂಡಿತರು ಅಮ್ಮನವರ ಪ್ರೇಮ ವಾತ್ಸಲ್ಯ ಸ್ವರೂಪವನ್ನೂ, ಯಜ್ಞದ ಪ್ರಾಮುಖ್ಯತೆಯನ್ನೂ ವಿವರಿಸಿದರು. ಮಂಗಳಾಭಿಷೇಕ ನಡೆಯಿತು. ಅಂದಿನ ಲಕ್ಷ್ಮೀಪೂಜೆಯಲ್ಲಿ ಎರಡು ಸಾವಿರಕ್ಕೂ ಹೆಚ್ಚಿನ ಗೃಹಸ್ಥರು ಭಾಗವಹಿಸಿದ್ದರು. ಆಳ್ವಾರರ ಬಗ್ಗೆಯಾದ ಉಪನ್ಯಾಸಗಳು ನಡೆದು ವಿಷ್ಣುಸಹಸ್ರನಾಮ ಪಾರಾಯಣವಾಯಿತು. ಅಂದು 7000 ಮಂದಿ ಭೋಜನ ಸ್ವೀಕರಿಸಿದರು.



ಗುರುವಾರ ಗಜವಾಹನೆಯಾಗಿ ಅಮ್ಮನವರು ಆಲಯದಿಂದ ಆಗಮೋಕ್ತರೀತಿಯಲ್ಲಿ ಯಾಗಸ್ಥಲಕ್ಕೆ ಆಗಮಿಸಿದರು. ಅಂದು ತಿರುಮಂಜನದ ನಂತರ ಶ್ರೀ ಪದ್ಮಾವತೀ ಶ್ರೀನಿವಾಸರ ಕಲ್ಯಾಣ ಮಹೋತ್ಸವ ಯಶಸ್ವಿಯಾಗಿ ನಡೆಯಿತು. ಯಾಗ ಕಾರ್ಯಕ್ರಮಗಳಲ್ಲಿ ಅಸಂಖ್ಯಜನ ಪಾಲುಗೊಂಡರು. ಧಾರ್ಮಿಕ ಉಪನ್ಯಾಸ, ಸಂಗೀತ ಸೇವೆಯನ್ನೂ ಸಮರ್ಪಿಸಲಾಯಿತು.

ಮಾರ್ಚ್ 17 ರಂದು ಶ್ರೀಯಾಗದ ಪೂರ್ಣಾಹುತಿ. ಆಂಧ್ರಪ್ರದೇಶದ ಜನತೆಯ ಪರವಾಗಿ, ಪ್ರತಿನಿಧಿಯಾಗಿ ಮುಖ್ಯಮಂತ್ರಿ ಶ್ರೀ ಎನ್.ಟಿ. ರಾಮರಾವ್ ಅವರು ತಮ್ಮ ಸತೀಮಣಿ ಶ್ರೀಮತಿ ಲಕ್ಷ್ಮೀಪಾರ್ವತಿಯವರೊಡನೆ ಪೂರ್ಣಾಹುತಿಯಲ್ಲಿ ಪಾಲುಗೊಂಡರು. ಯಾಗದಲ್ಲಿ ಯಜಮಾನರಾಗಿ ಪಾಲುಗೊಂಡು ಇಷ್ಟಿ ಕಾರ್ಯಕ್ರಮವನ್ನು ನಡೆಸಿದ ಮುಖ್ಯಮಂತ್ರಿಯವರು ವೇದಮಂತ್ರಗಳ ನಡುವೆ ಪೂರ್ಣಾಹುತಿ ಸಮರ್ಪಿಸಿದರು. ಯಾಗದ ನಂತರ ಇಪ್ಪತ್ನಾಲ್ಕು ಹೋಮಕುಂಡಗಳಿಂದ ಯಜ್ಞಶೇಷವನ್ನು ಸಂಗ್ರಹಿಸಿ ಶ್ರೀ ಎನ್.ಟಿ. ರಾಮರಾವ್ ದಂಪತಿಗಳಿಗೂ ಇತರ ಪ್ರಮುಖರಿಗೂ ನೀಡಲಾಯಿತು.

ಪೂರ್ಣಾಹುತಿ ಕಾರ್ಯಕ್ರಮದಲ್ಲಿ ಆಂಧ್ರಪ್ರದೇಶದ ರೆವಿನ್ಯೂ ಇಲಾಖಾ ಮಂತ್ರಿ ಶ್ರೀ ಎನ್. ಚಂದ್ರಬಾಬುನಾಯುಡು, ಉನ್ನತ ವಿದ್ಯಾಶಾಖಾಮಂತ್ರಿ ಶ್ರೀ ಜೆ. ಮುದ್ದುಕೃಷ್ಣಮನಾಯುಡು, ಮುಜರಾಯಿ ಇಲಾಖಾಮಂತ್ರಿ ಶ್ರೀ ಸಿಂಹಾದ್ರಿ ಸತ್ಯನಾರಾಯಣ, ಮತ್ತಿತರ ಲೋಕಸಭಾ ಸದಸ್ಯರೂ, ವಿಧಾನಸಭಾ ಸದಸ್ಯರೂ ಪಾಲುಗೊಂಡರು. ಮಾನವ ಶ್ರೇಯಸ್ಸಿಗಾಗಿಯೂ, ಸಕಲ ಮಾನವ ಸಂಪತ್ತಿಗಾಗಿ, ಸುಖ ಶಾಂತಿಗಳಿಗಾಗಿ ಯಜ್ಞ ನಿರ್ವಹಣೆಯಾಗಬೇಕು. ಅದನ್ನು ಸಮಾಜ ಸ್ವಾಗತಿಸಬೇಕು ಎಂದು ಶ್ರೀ ಶ್ರೀ ಚಿನ್ನಜೀಯರ್ ಅಭಿಪ್ರಾಯಪಟ್ಟರು.

ವಿಶ್ವಶಾಂತಿ, ಸೌಂದರ್ಯಗಳು ಶ್ರೀಯಾಗದ ಉದ್ದೇಶವೇ ಆದರೂ ತಿರುಚಾನೂರಿನ ಅಭಿವೃದ್ಧಿಗಾಗಿ ಅಮ್ಮನವರ ಅನುಗ್ರಹ ಪಡೆಯುವುದು ಒಂದು ಪ್ರಯೋಜನವೇ ಎಂದು ನುಡಿಯುತ್ತ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶಕುಮಾರ್ ಅವರು, ತಿರುಚಾನೂರು ಆಲಯಕ್ಕೆ ಹೆಚ್ಚು ಹೆಚ್ಚು ಭಕ್ತರು ಬರಲು ಬಯಸುವಂತೆ, ಇಲ್ಲಿನ ಸ್ಥಳೀಯ ಅನುಕೂಲಗಳನ್ನು ವಿಸ್ತರಿಸುವ ವ್ಯಾಪಕ ಕಾರ್ಯಕ್ರಮಕ್ಕೆ ಶ್ರೀಯಾಗ ನಾಂದಿಯಾಗುತ್ತದೆ ಎಂದು ತಿಳಿಸಿದರು.



# ವಿರಾಗಿಗೆ ಮಹಾಮಜ್ಜನ

**ಎಸ್. ಆರ್. ಉಭಯ** (ಚಿತ್ರಗಳು -- ಕೋಂಕಾರ ಪತ್ರಿಕೆ) ಕೃಪೆ: ಕನ್ನಡಪ್ರಭ.

ಪಶ್ಚಿಮ ಘಟ್ಟಗಳ ಮಗ್ಗುಲಿನ, ಆಪ್ಯಾಯಮಾನ ಪ್ರಾಕೃತಿಕ ಚೆಲುವಿನ ಧರ್ಮಸ್ಥಳ ಕ್ಷೇತ್ರದಲ್ಲಿ ಶುಕ್ರವಾರ ಸೂರ್ಯನ ಕಿರಣಗಳು ಬೆಟ್ಟಗಳ ನೆತ್ತಿಯ ಮೂಲೆ ಮೂಲೆಗಳಿಂದ ಹೊರಹೊಮ್ಮುತ್ತಿದ್ದಂತೆ ಎಲ್ಲೆಲ್ಲಾ ಸಂಭ್ರಮೋಲ್ಲಾಸ. 'ರತ್ನಗಿರಿ'ಯ ಶಿಖರದಲ್ಲಿ 39. ಅಡಿಗಳೆತ್ತರಕ್ಕೆ ಸ್ಥಿತಪ್ರಜ್ಞೆಯ ಮುಖ ಹೊತ್ತು ನಿಂತಿರುವ ವಿರಾಟ್ ವಿರಾಗಿ, ತ್ಯಾಗದ ಮೂರ್ತಿ, ಮುದ್ದು ಮೊಗದ ಗಾರುಡಿಗ ಭಗವಾನ್ ಬಾಹುಬಲಿಗೆ ಮೊಟ್ಟಮೊದಲ ಮಹಾಮಜ್ಜನ ನಡೆಯುತ್ತಿದ್ದಂತೆ ನೆರೆದಿದ್ದ ಭಕ್ತರಲ್ಲಿ ಎಲ್ಲಿಲ್ಲದ ಶ್ರದ್ಧೆ, ಭಕ್ತಿ, ಖುಷಿ......

ಪವಿತ್ರ ಲೋಹಗಳು, ಹರಳುಗಳು, ಪವಿತ್ರ ಜಲ, ಕಬ್ಬಿನ ರಸ, ಕ್ಷೀರ, ತುಪ್ಪ, ಮೊಸರು, ಎಳನೀರು, ಜೇನುತುಪ್ಪ, ಶ್ರೀಗಂಧ, ಅರಿಶಿನ, ಚಂದನದ ನೀರನಿಂದ 1008 ಕಲಶಗಳ ಮೂಲಕ ಶಾಂತಿ, ಶಾಂತಿ, ನಿಗ್ರಹದ ಸುಂದರಮೂರ್ತಿ ಭಗವಾನ್ ಬಾಹುಬಲಿಗೆ ಅಭಿಷೇಕ ನರವೇರುತ್ತಿದ್ದಂತೆ 'ರತ್ನಗಿರಿಯ' ಸುತ್ತಲೂ ವಟ್ಟೈಸಿದ್ದ ಲಕ್ಷಾಂತರ ಮಂದಿ ಭಕ್ತಾದಿಗಳು ಭಯ ಭಕ್ತಿಯಿಂದ 'ಜಯಜಯಕರ' ಎಂದು ಮಂತ್ರಘೋಷಣೆ ಮಾಡಿದರು.

ನಾನಾ ಅಭಿಷೇಕ ದ್ರವ್ಯಗಳು, ಮತ್ತು ದಿವ್ಯ ಜಲ ಮಹಾನ್ ಮೂರ್ತಿಯ ಇಡೀ ದೇಹವನ್ನು ತೊರೆ ತೊರೆಯಾಗಿ, ನೊರೆ ನೊರೆಯಾಗಿ ತೊಯ್ದುಕೊಂಡು ಕೆಳಗಿಳಿಯುತ್ತಿದ್ದಂತೆ, ಮುಂಜಾವಿನ ಸೂರ್ಯನ ಎಳೆಯ ಕಿರಣಗಳ ಬೆಳಕಿಗೆ ಎದುರಾಗಿ ಕ್ಷಣ ಕ್ಷಣಕ್ಕೂ ಒಂದೊಂದು ರಂಗು ಮೂಡಿ ನೆರೆದ ಜನರ ಕಣ್ಣು ಕೋರೈಸಿತು. ದೂರ ದೂರದಿಂದ ನಿಂತು ನೋಡುತ್ತಿದ್ದ ಭಕ್ತ ಸ್ತೋಮಕ್ಕೆ ನಾನಾ ಬಣ್ಣಗಳ ಅಭಿಷೇಕ ಆ ದೆಳ್ಳಂ ದೆಳಕಿನಲ್ಲಿ ಕಾಮನ ಬಿಲ್ಲಿನಂತೆ ಗೋಚರಿಸಿ ಮೈಮನ ಪುಳಕಗೊಳಿಸಿತು.

ಕಳೆದ ಆರು ದಿನಗಳಿಂದ ನವ ವಧುವಿನಂತೆ ಸಿಂಗರಿಸಿಕೊಂಡಿದ್ದ ಇಡೀ ಧರ್ಮಸ್ಥಳ ಕ್ಷೇತ್ರ ಕೇವಲ 12 ವರುಷಗಳ ಹರೆಯದ, ಮುದ್ದು ಮೊಗದ ಮೂರ್ತಿಗೆ ಸುಗಂಧಭರಿತ ಮಹಾಮಜ್ಜನ ಮಾಡಿ ಧನ್ಯವಾಯಿತು.

ಧರ್ಮಾಧಿಕಾರಿ ಡಿ. ವೀರೇಂದ್ರ ಹೆಗ್ಗಡೆ ಮತ್ತು ಅವರ ಕುಟುಂಬದ ಮಾರ್ಗದರ್ಶನದಂತೆ ಬಾಹುಬಲಿ ಮೂರ್ತಿಗೆ 1008 ಕಲಶಗಳ ಅಭಿಷೇಕ ಆಗುತ್ತಿರುವಂತೆ ಭಕ್ತಾದಿಗಳ 'ಬಾಹುಬಲಿ ಭಗವಾನ್ ಕಿ ಜೈ' ಎಂಬ ಉದ್ಘೋಷ ಮುಗಿಲು ಮುಟ್ಟಿತ್ತು.

ದಿವ್ಯ ಮಂತ್ರ, ಸಂಸ್ಕೃತ, ಹಿಂದಿ, ಕನ್ನಡ ಮತ್ತು ಇತರ ಭಾಷೆಗಳಲ್ಲಿ ಅಲೆ ಅಲೆಯಾಗಿ ಕೇಳಿಬಂತು.



ಅನೇಕ ಗುಂಪುಗಳಾಗಿ ಸೇರಿದ್ದ ಜೈನ ಭಕ್ತರು ಅಪಾರ ಶ್ರದ್ಧೆ, ಭಕ್ತಿಯಿಂದ ಶಾಂತ ಶಾಂತವಾಗಿ ಮಂತ್ರ ಪಠಿಸಿ ಇಡೀ ವಾತಾವರಣಕ್ಕೆ ಹೊಸ ಚೈತನ್ಯ ತುಂಬಿದರು.

'ರತ್ನಗಿರಿ'ಯ ಸುತ್ತಲೂ ಸೇರಿದ್ದ ಮುನಿಗಳು, ಶ್ರಮಣ ಮತ್ತು ಮುನಿ ಸಂಘದ ಇತರ ಸದಸ್ಯರು ಹಾಗೂ ಭಟ್ಟಾರಕರು ಮಂಗಳ ಪ್ರವಚನ ಮಾಡಿದರು.

ಆಚಾರ್ಯರತ್ನರಾದ ಶ್ರೀ ಶ್ರೀ ವರ್ಧಮಾನ ಸಾಗರ ಮುನಿಗಳು, ಶ್ರವಣಬೆಳಗೊಳದ ಶ್ರೀ ಶ್ರೀ ಚಾರುಕೀರ್ತಿ ಸ್ವಾಮಿಜೀ, ಮೂಡಬಿದ್ರೆಯ ಶ್ರೀ ಶ್ರೀ ಚಾರುಕೀರ್ತಿ ಪಂಡಿತಾಚಾರ್ಯ ಸ್ವಾಮಿಜೀ, ನಾನಾ ಮಠಗಳ ಜೈನ ಸ್ವಾಮಿಗಳು ಮತ್ತು ಮುಖ್ಯಮಂತ್ರಿ ಎಚ್.ಡಿ. ದೇವೇಗೌಡ ಅವರು ಈ ಅತ್ಯಪೂರ್ವ ದೃಶ್ಯವನ್ನು ಕಣ್ತುಂಬ ನೋಡಿದರು.

ನವದಂಪತಿಯ ಸುಶೀಲ್ ಕುಮಾರ್ ಜೈನ್ ಅವರು ಮೊದಲ ಕಲಶವನ್ನು ಪೂಜಿಸಿ, ಸುರಿದರು. ಬಾಹುಬಲಿಗೆ ಬೃಹತ್ ವಿಗ್ರಹಕ್ಕೆ ಸ್ವರ್ಣರಂಜಿತ ಮಾಲೆ ತೊಡಿಸಲಾಗಿತ್ತು.

ರತ್ನ ಕಲಶ, ವಿದ್ರು ಕಲಶ, ಸುವರ್ಣ ಕಲಶ, ರಜತ ಕಲಶ ಮತ್ತು ತಾಮ್ರ ಕಲಶಗಳಿಂದ ವಿಗ್ರಹಕ್ಕೆ ಅಭಿಷೇಕ ಮಾಡಲಾಯಿತು. ಈ ಕಲಶಗಳಲ್ಲಿ ರಾಷ್ಟ್ರದ ನಾನಾ ನದಿಗಳ ಪವಿತ್ರ ಜಲವನ್ನು ತುಂಬಲಾಗಿತ್ತು.

ಬೆಳಗ್ಗೆ 9.15ಕ್ಕೆ ಆರಂಭವಾದ ಕಲಶಾಭಿಷೇಕ ಮೂರು ಗಂಟೆಗಳ ಕಾಲ ನಿರಂತರವಾಗಿ ನಡೆಯಿತು. ಸುಗಂಧಭರಿತ ಅಭಿಷೇಕ ಆರಂಭವಾಗುತ್ತಿದ್ದಂತೆ ಇಡೀ ಪರಿಸರದಲ್ಲಿ ಸುವಾಸನೆ ಹೊರಹೊಮ್ಮಿತು. ಭಕ್ತಜನರು ಏಕಕಂಠದಲ್ಲಿ 'ಬೋಲೋ ಭಗವಾನ್ ಬಾಹುಬಲಿಕಿ ಜೈ' ಎಂದು ಘೋಷಣೆ ಕೂಗಿದರು.

ನಂತರ ಧರ್ಮಸ್ಥಳದ ಧರ್ಮಾಧಿಕಾರಿ ಮತ್ತು ಅವರ ಕುಟುಂಬದ ಸದಸ್ಯರು 'ಪೂರ್ಣಕುಂಭ'ದ ಅಭಿಷೇಕ ಮಾಡಿದರು. ಇದಾದ ತಕ್ಷಣ ವಿಗ್ರಹದ ನೆತ್ತಿಯಿಂದ ಕನಕಾಭಿಷೇಕ ಹಾಗೂ ಪುಷ್ಪವೃಷ್ಟಿ ಜರಗುಗೊಳಿಸಿತು.

ಅಭಿಷೇಕ ಸಮಾರಂಭಕ್ಕೆ 100 ಲೀಟರ್ ಎಳನೀರು, 100 ಲೀಟರ್ ಕಬ್ಬಿನ ರಸ, 300 ಲೀಟರ್ ಹಾಲು, 25 ಕೆ. ಜಿ. ಅಕ್ಕಿಹಿಟ್ಟು, 100 ಕೆ. ಜಿ. ಅರಿಶಿಣದ ಲೇಪನ, 30 ಕೆ. ಜಿ. ಶ್ರೀಗಂಧದ ಹುಡಿ ಮತ್ತು 100 ಕೆ. ಜಿ. ಅಷ್ಟಗಂಧ ಬಳಸಲಾಗಿತ್ತು.

(36 ನೇ ಪುಟ ನೋಡಿ)

**ಶ್ರೀ ಮಂಜುನಾಥಸ್ವಾಮಿ ದೇವಾಲಯ, ಧರ್ಮಸ್ಥಳ**



# ಪಾದುಕಾ ಸ್ವೀಕರಣ

---ಮೈ. ನ. ನಾಗರಾಜ.

ಭರತನು, ಕೌಸಲ್ಯೆ, ಸುಮಿತ್ರೆ, ಕೈಕೇಯಿರನ್ನೂ, ವಸಿಷ್ಠರನ್ನೂ, ದೊಡ್ಡ ಪರಿವಾರವನ್ನೂ ಕರೆದು ಕೊಂಡು ಕಾಡಿನ ಕಡೆ ಪ್ರಯಾಣ ಬೆಳೆಸಿದನು. ಅವನ ಪರಿವಾರದಲ್ಲಿ ಕುದುರೆಗಳೂ, ರಥಗಳೂ, ಆನೆಗಳೂ ಇದ್ದವು. ಅಲ್ಲದೆ, ಪುರನಿವಾಸಿಗಳೂ ಇದ್ದರು. ಎಲ್ಲರಿಗೂ 'ಶ್ರೀರಾಮನನ್ನು ಯಾವಾಗ ನೋಡುವೆವು' ಎಂಬ ತವಕ. ದಾರಿಯಲ್ಲಿ ಗಂಗಾ ನದಿ ಸಿಕ್ಕಿತು. ಆ ಪವಿತ್ರ ನದಿಯಲ್ಲಿ ಭರತನು ಪಿತೃತರ್ಪಣವನ್ನು ಕೊಟ್ಟನು. ಗುಡಾರಗಳನ್ನು ಕಟ್ಟಿ ಕೊಂಡು ಆ ರಾತ್ರಿ ಅಲ್ಲಿಯೇ ವಿಶ್ರಾಂತಿ ಪಡೆದರು.

ಹಿಂದೆ ಶ್ರೀರಾಮನು ಕಾಡಿಗೆ ಹೊರಟು ಮೊದಲ ರಾತ್ರಿಯನ್ನು ಅಲ್ಲಿ ಕಳೆದಿದ್ದ. ಅಲ್ಲಿಯ ರಾಜ ಗುಹ. ಈಗ ಭರತನು ಬಂದಿರುವ ವಿಷಯ ಅವನಿಗೆ ತಿಳಿಯಿತು. 'ಭರತನೇಕೆ ಇಲ್ಲಿಗೆ ಬಂದ? ಶ್ರೀರಾಮನಿಗೆ ಏನೂ ತೊಂದರೆಯಾಗ ದಿದ್ದರೆ ಸಾಕು,' ಎಂದುಕೊಂಡು ಭರತನ ಬಳಿಗೆ ಬಂದ. ಭರತನು 'ಗುಹ, ನಾನು ಶ್ರೀರಾಮನ ತಮ್ಮ. ನಮ್ಮ ಅಣ್ಣನನ್ನು ಹುಡುಕಿಕೊಂಡು ಬಂದಿದ್ದೇನೆ. ಅವನ ರಾಜ್ಯವನ್ನು ಅವನಿಗೆ ಒಪ್ಪಿಸಬೇಕಾಗಿದೆ. ಈಗ ಶ್ರೀರಾಮನು ಎಲ್ಲಿರುವನೆಂಬುದು



ನಿನಗೆ ಗೊತ್ತೆ?' ಎಂದು ಕೇಳಿದನು. ಭರತನ ಮಾತುಗಳನ್ನು ಕೇಳಿ ಗುಹನಿಗೆ ಸಮಾಧಾನವಾಯಿತು. ಹಾಗೆಯೇ ಅವನ ವಿಶಾಲಬುದ್ಧಿಯನ್ನು ನೋಡಿ ಸಂತೋಷವೂ ಆಯಿತು. ಅವನು 'ರಾಜ ಕುಮಾರ, ನೀನು ಈ ರಾತ್ರಿ ಇಲ್ಲಿಯೇ ವಿಶ್ರಾಂತಿ ತೆಗೆದುಕೋ. ನಾಳೆ ಬೆಳಗಾದ ಕೂಡಲೇ ದಾರಿ ತೋರಿಸುವ ವ್ಯವಸ್ಥೆ ಮಾಡುತ್ತೇನೆ' ಎಂದನು. ಭರತನು 'ಗುಹ, ಶ್ರೀರಾಮನು ಕಾಡನ್ನು ಪ್ರವೇಶಿಸುವ ಹಿಂದಿನ ರಾತ್ರಿ ನಿನ್ನ ಬಳಿಯೇ ಇದ್ದನಲ್ಲವೇ ? ಅವನ ಮಲಗಿದ್ದ ಸ್ಥಳ ಯಾವುದು?' ಎಂದು ಕೇಳಿದನು. ಗುಹನು ಭರತನನ್ನು ಅಲ್ಲಿಗೆ ಕರೆದುಕೊಂಡು ಹೋಗಿ, 'ರಾಜಕುಮಾರ, ಶ್ರೀರಾಮ ಸೀತೆಯರು ಇಲ್ಲಿಯೇ ಮಲಗಿದ್ದರು. ಅವರು, ನಾನು ಕೊಟ್ಟ ಆಹಾರವನ್ನು ಸ್ವೀಕರಿಸಲಿಲ್ಲ. ಕೇವಲ ಗಂಗಾಜಲವನ್ನು ಮಾತ್ರ ಕುಡಿದರು. ನಾನು ಕೊಟ್ಟ ಹಂಸ ತೂಲಿಕಾತಲ್ಪದ ಮೇಲೆ ಮಲಗದೆ ಹುಲ್ಲಿನ ಮೇಲೆ ಮಲಗಿಕೊಂಡರು. ಲಕ್ಷ್ಮಣನು ರಾತ್ರಿಯೆಲ್ಲಾ ಎಚ್ಚರವಾಗಿದ್ದು ಅವರಿಗೆ ಕಾವಲಿದ್ದನು' ಎಂದನು. ಭರತನು ಕಣ್ಣೀರು ತುಂಬಿಕೊಂಡು 'ಆಹಾ ವಿಧಿಯೇ, ರಾಜನಾಗದೇಕಾಗಿದ್ದ ಶ್ರೀರಾಮ ಹುಲ್ಲಿನ ಮೇಲೆ ಮಲಗದೇಕಾಯಿತೇ? ಮೃಷ್ಟಾನ್ನ ಭೋಜನವನ್ನು ತ್ಯಜಿಸಿ ಬರಿಯ ನೀರಿನಿಂದ ಹೊಟ್ಟೆ ತುಂಬಿಸಿಕೊಳ್ಳದೇಕಾಯಿತೇ? ಮಲಗಿಕೊಂಡಾಗ ಹುಲ್ಲು ಮೈಯನ್ನು ಚುಚ್ಚಲಿಲ್ಲವೇ? ಅವರಿಬ್ಬರಿಗೂ ನಿದ್ದೆ ಹೇಗೆ ಬಂತು? ಗೀತವಾದ್ಯಗಳ ಮಂಗಳಧ್ವನಿಯನ್ನು ಕೇಳಿ ಎಚ್ಚರಗೊಳ್ಳದೇಕಾದ ಶ್ರೀರಾಮನು ಕಾಡಿನಲ್ಲಿ ಕ್ರೂರ ಮೃಗಗಳ ಭಯಂಕರ ಗರ್ಜನೆಯನ್ನು ಕೇಳಿ ಎಚ್ಚರಗೊಳ್ಳದೇಕೆ? ಉಹೂಂ. ಇದು ಸರಿಯಲ್ಲ, ಇಂದಿನಿಂದ ನಾನು ಹಾಸಿಗೆಯ ಮೇಲೆ ಮಲಗಲಾರೆ. ಹುಲ್ಲೇ ನನ್ನ ಹಾಸಿಗೆ. ಹಣ್ಣು ಹಂಪಲುಗಳಿಂದ ಹೊಟ್ಟೆ ತುಂಬಿಸಿಕೊಳ್ಳುತ್ತೇನೆ. ನಾನು ಮಡಿಯುತ್ತೇನೆ. ಲಕ್ಷ್ಮಣನೇ ನನಗಿಂತ ಭಾಗ್ಯಶಾಲಿ. ಅಣ್ಣನ ಸೇವೆ ಮಾಡುವ ಸೌಭಾಗ್ಯ ಅವನಿಗೆ ಲಭಿಸಿತು' ಎಂದುಕೊಂಡನು.

ಮಾರನೆಯ ಬೆಳಗ್ಗೆ ಬೇಗ ಎದ್ದರು. ಗುಹನು, ಐನೂರು ನೌಕೆಗಳನ್ನು ತರುವಂತೆ ತನ್ನ ಸೇವಕರಿಗೆ ಆಜ್ಞಾಪಿಸಿದನು. ನೌಕೆಗಳು ಗಂಟೆಗಳನ್ನೂ ದೊಡ್ಡ ದೊಡ್ಡ ಪತಾಕೆಗಳನ್ನೂ ಹೊಂದಿದ್ದವು. ನೌಕೆಗಳಲ್ಲಿ ಗಾಳಿಯು ಹಿತವಾಗಿ ಬೀಸುತ್ತಿತ್ತು. ಭರತನೂ ಅವನ ಬಂಧುಗಳೂ ನೌಕೆಗಳನ್ನು ಹತ್ತಿದರು. ಕೆಲವು ಸೈನಿಕರು ನದಿಯನ್ನು ತೆಪ್ಪಗಳ ಸಹಾಯದಿಂದ ದಾಟಿದರು. ಮಾವುತರು ಆನೆಗಳನ್ನು ನದಿಯಲ್ಲಿ ನಡೆಸಿಕೊಂಡು ಬಂದರು. ಹಲವರು ಈಜುತ್ತಾ ನದಿಯನ್ನು ಹಾಯ್ದರು. ಎಲ್ಲರೂ

ಪ್ರಯಾಗವನ್ನು ತಲುಪಿದರು. ದೋಣಿಯಿಂದ ಇಳಿದರು. ತನ್ನ ಸೈನಿಕರಿಗೆ ವಿಶ್ರಮಿಸಿಕೊಳ್ಳುವಂತೆ ತಿಳಿಸಿ ಭರತನು ಭರದ್ವಾಜ ಮುನಿಗಳ ಆಶ್ರಮಕ್ಕೆ ಹೊರಟನು. ಆಶ್ರಮಕ್ಕೆ ಹೋಗುವ ಮೊದಲು ತಲೆಯ ಮೇಲೆ ಧರಿಸಿದ್ದ ಉಡುಪನ್ನು ತೆಗೆದು ಪಂಚೆಯುಟ್ಟುಕೊಂಡರು. ಉತ್ತರೀಯವನ್ನು ಹೊದೆದುಕೊಂಡು ಮಂತ್ರಿಗಳನ್ನೂ ಇತರರನ್ನೂ ದೂರದಲ್ಲಿ ನಿಲ್ಲಿಸಿ, ವಸಿಷ್ಠರ ಹಿಂದೆ ತಾನೊಬ್ಬನೇ ಆಶ್ರಮಕ್ಕೆ ಹೊರಟನು. ಭರದ್ವಾಜರು ವಸಿಷ್ಠರನ್ನೂ ಭರತನನ್ನೂ ಸ್ವಾಗತಿಸಿದರು. ಭರತನು ಭರದ್ವಾಜರಿಗೆ ನಮಸ್ಕರಿಸಿ ಮಹರ್ಷಿಗಳೇ, ನಾನು ಶ್ರೀರಾಮನನ್ನು ಹುಡುಕಿಕೊಂಡು ಬಂದಿದ್ದೇನೆ. ಅವನ ರಾಜ್ಯವನ್ನು ಅವನಿಗೆ ಒಪ್ಪಿಸಬೇಕೆಂದು ಶ್ರೀರಾಮನನ್ನು ಹುಡುಕುತ್ತಿದ್ದೇನೆ. ಆತನು ಎಲ್ಲಿರುವನೆಂದು ನಿಮಗೆ ತಿಳಿದಿದ್ದರೆ ದಯವಿಟ್ಟು ತಿಳಿಸಿ' ಎಂದನು. ಭರದ್ವಾಜರು, 'ಭರತ, ನಿನ್ನದು ಉದಾರ ಮನಸ್ಸು. ಕೈಗೆ ಬಂದಿರುವ ರಾಜ್ಯವನ್ನು ಬೇಡ ಎನ್ನುತ್ತಿದ್ದೀಯೆ. ನಿನ್ನ ಕೀರ್ತಿ ಎಲ್ಲಕಡೆ ಬೆಳಗಲಿ. ಶ್ರೀರಾಮನು ಚಿತ್ರಕೂಟದಲ್ಲಿದ್ದಾನೆ. ನೀವೆಲ್ಲರೂ ಈ ರಾತ್ರಿ ಇಲ್ಲಿಯೇ ಇದ್ದು ನಾಳೆಯ ದಿನ ಪ್ರಯಾಣವನ್ನು ಬೆಳೆಸಿ' ಎಂದರು. ಭರತನ ಪರಿವಾರಕ್ಕೆ ಭಾರಿ ಔತಣವನ್ನೇ ಏರ್ಪಡಿಸಿದರು.

ಪ್ರಾತಃಕಾಲವಾಯಿತು. ಭರದ್ವಾಜರು 'ಭರತ, ಇಲ್ಲಿಗೆ ಎರಡೂವರೆ ಯೋಜನ ದೂರದಲ್ಲಿ ಚಿತ್ರಕೂಟ ಎಂಬ ಪರ್ವತವಿದೆ. ಅದು ಬೆಟ್ಟಗಳಿಂದಲೂ, ನದಿಗಳಿಂದಲೂ ಅರಣ್ಯಗಳಿಂದಲೂ ಕೂಡಿ ಸುಂದರವಾಗಿದೆ. ಪರ್ವತದ ಉತ್ತರದಲ್ಲಿ ಮಂದಾಕಿನಿ ನದಿ ಹರಿಯುತ್ತಿದೆ. ನದಿಯ ಪಕ್ಕದಲ್ಲಿರುವ ಗಿಡಗಳು ಸುಂದರವಾದ ಹೂಗಳಿಂದ ಕಂಗೊಳಿಸುತ್ತಿವೆ. ಶ್ರೀರಾಮ ಲಕ್ಷ್ಮಣ ಸೀತೆಯರು ಅಲ್ಲಿ ಪರ್ಣಕುಟಿಯನ್ನು ಕಟ್ಟಿಕೊಂಡು ವಾಸವಾಗಿದ್ದಾರೆ. ನೀನು ಹೋಗಿ ಬಾ. ನಿನಗೆ ಒಳ್ಳೆಯದಾಗಲಿ' ಎಂದು ಆಶೀರ್ವದಿಸಿದರು. ಭರತನು ತನ್ನ ಪರಿವಾರದೊಡನೆ ಚಿತ್ರಕೂಟದ ಕಡೆ ಪ್ರಯಾಣ ಬೆಳೆಸಿದನು.

ಅವರು ಹಾಗೆಯೇ ಅನೇಕ ನದಿಗಳನ್ನೂ ಅರಣ್ಯಗಳನ್ನೂ ಬೆಟ್ಟಗಳನ್ನೂ ದಾಟಿ ಒಂದು ದೊಡ್ಡ ವನಪ್ರದೇಶಕ್ಕೆ ಬಂದರು. ಆ ಕಾಡಿನಲ್ಲಿ ಅನೇಕ ಆನೆಗಳಿದ್ದವು. ಪ್ರಷತ, ರುರು ಎಂಬ ಜಿಂಕೆಗಳೂ ಕರಡಿಗಳೂ ಓಡಾಡುತ್ತಿದ್ದವು. ಅವುಗಳನ್ನು ನೋಡಿ ಭರತನು ವಸಿಷ್ಠರನ್ನು ಕುರಿತು 'ಮಹಾತ್ಮರೆ, ಭರದ್ವಾಜರು ಹೇಳಿದ ಆಶ್ರಮ ಇದೇ ಎಂದು ತೋರುತ್ತದೆ. ಅಗೋ, ಅದೇ ಮಂದಾಕಿನಿ ನದಿ. ಇದೇ ಚಿತ್ರಕೂಟ ಪರ್ವತ. ಈ ತಪ್ಪಲುಗಳು ಸುಂದರವಾಗಿವೆ. ಮರಗಳಿಂದ ಹೂಗಳು ನಿರಂತರವಾಗಿ ಉದುರುತ್ತಿವೆ. ಅತ್ತ ಕಿನ್ನರರು ಸಂಚರಿಸುತ್ತಿದ್ದಾರೆ. ನೀರಿನಲ್ಲಿ ಮೊಸಳೆಗಳಿರುವಂತೆ ಈ ಕಾಡಿನಲ್ಲಿ ಅನೇಕ ಕ್ರೂರ ಪ್ರಾಣಿಗಳಿವೆ. ನಮ್ಮ ಸೈನ್ಯವನ್ನು ನೋಡಿ ಜಿಂಕೆಗಳು ಥಟ್ಟನೆ ಹಾರಿ ದೂರಸರಿಯುತ್ತಿವೆ. ನವಿಲುಗಳು ಬೆಟ್ಟದ ಕಡೆ ಓಡುತ್ತಿವೆ. ಈ ಸ್ಥಳ ಬಹಳ ಸೊಬಗಿನಿಂದ ಕೂಡಿದೆ. ಸ್ವರ್ಗದಂತೆಯೇ ಇದೆ. ಈಗ ಸೈನಿಕರು ಮುಂದೆ ಹೋಗಿ ಅಡವಿಯನ್ನು ಶೋಧಿಸಲಿ. ಶ್ರೀರಾಮ ಲಕ್ಷ್ಮಣರು ಕಾಣುವವರೆಗೂ ಅರಣ್ಯವನ್ನು ಹುಡುಕಲಿ' ಎಂದನು. ಸೈನಿಕರು ಹಾಗೆಯೇ ಅಡವಿಯಲ್ಲಿ ಸಂಚರಿಸಿದರು. ದೂರದಲ್ಲಿ ಒಂದು ಕಡೆ ಹೊಗೆಯಾಡುತ್ತಿತ್ತು. ಅದನ್ನು ಕಂಡು ಭರತನ ಬಳಿಗೆ ಹಿಂದಿರುಗಿದರು. ವಿಷಯವನ್ನು ತಿಳಿಸಿದರು. ಭರತನು, "ಸರಿ, ನೀವು ಇಲ್ಲೇ ಇರಿ. ನಾನು ಕೆಲವು ಸೈನಿಕರನ್ನು ಕರೆದುಕೊಂಡು ಅಲ್ಲಿಗೆ ಹೋಗುತ್ತೇನೆ' ಎಂದನು. ನಂತರ ಸುಮಂತ್ರ ಮುಂತಾದ ಕೆಲವು ಪ್ರಮುಖರನ್ನು ಕರೆದುಕೊಂಡು ಸೈನಿಕರು ತೋರಿಸಿದ ಜಾಗದ ಕಡೆ ಹೊರಟನು. ಇತರರು ಅಲ್ಲಿಯೇ ನಿಂತರು.

ಆ ಸಮಯದಲ್ಲಿ ಶ್ರೀರಾಮನು ಪರ್ವತದಲ್ಲಿ ಸೀತೆಯೊಡನೆ ಸಂಚರಿಸುತ್ತಾ ಪ್ರಕೃತಿ ಸೌಂದರ್ಯವನ್ನು ಸವಿಯುತ್ತಿದ್ದನು. ಅವನ ಮನಸ್ಸು ಬಹಳ ಉಲ್ಲಾಸಗೊಂಡಿತ್ತು. ಅವನು ಸೀತಾದೇವಿಯನ್ನು ಕುರಿತು, 'ಸೀತೆ, ಈ ಸುಂದರ ದೃಶ್ಯಗಳನ್ನು ನೋಡು. ಇಲ್ಲಿ ನಾನಾ ಬಗೆಯ ಪಕ್ಷಿಗಳು ಹಾರಾಡುತ್ತಿವೆ. ಶಿಖರಗಳು ಆಕಾಶವನ್ನು ಭೇದಿಸುವಂತೆ ಎತ್ತರವಾಗಿವೆ. ಈ ಪ್ರದೇಶದ ಕೆಲವು ಭಾಗಗಳು ಬೆಳ್ಳಿಯಂತೆ ಹೊಳೆಯುತ್ತಿವೆ. ಮತ್ತೆ ಕೆಲವು ರಕ್ತದಂತೆ ಕೆಂಪಾಗಿವೆ. ಹಲವು ಬೆಂಕಿಯ ಜ್ವಾಲೆಯಂತೆಯೂ, ಪಾದರಸದಂತೆಯೂ ಇವೆ.'

'ಇಲ್ಲಿ ಹುಲಿಗಳೂ ಚಿರತೆಗಳೂ ಇವೆ. ಕರಡಿಗಳು ಹಿಂಡುಹಿಂಡಾಗಿವೆ. ಆದರೆ ಇದು ಋಷಿಮುನಿಗಳ ತಪಸ್ಸಿನಿಂದ ಪುಣ್ಯಸ್ಥಳವಾಗಿದೆ. ಆದ್ದರಿಂದ ಆ ಕ್ರೂರ ಮೃಗಗಳು ಯಾರನ್ನೂ ಹಿಂಸಿಸುವುದಿಲ್ಲ. ಈ ಕಾಡಿನಲ್ಲಿ ಕ್ರೂರಪ್ರಾಣಿಗಳೂ ಸಾಧುಪ್ರಾಣಿಗಳೂ ಒಟ್ಟಿಗೆ ವಾಸಿಸುತ್ತವೆ. ಹುಲಿಯೂ ಹಸುವೂ ಒಂದೇ ಕೊಳದಲ್ಲಿ ಅಕ್ಕಪಕ್ಕದಲ್ಲಿ ನಿಂತು ನೀರು ಕುಡಿಯುತ್ತವೆ. ಇದೆಲ್ಲ ಋಷಿಗಳ ತಪಸ್ಸಿನ ಪ್ರಭಾವ. ಒಳ್ಳೆಯವರ ಸಹವಾಸದಲ್ಲಿದ್ದರೆ ಎಲ್ಲರಿಗೂ ಒಳ್ಳೆಯ ಬುದ್ಧಿಯೇ ಬರುತ್ತದೆ' ಎಂದನು. ಅಲ್ಲಿಗೆ ಲಕ್ಷ್ಮಣನೂ ಬಂದು ಅವರನ್ನು ಸೇರಿಕೊಂಡನು. ಅಷ್ಟು ಹೊತ್ತಿಗೆ ಕಾಡಿನ ಪ್ರಾಣಿಗಳು ದಿಕ್ಕಾಪಾಲಾಗಿ ಚದರಿ ಓಡಿಹೋಗುತ್ತಿರುವುದನ್ನು ಶ್ರೀರಾಮನು ನೋಡಿದನು. ಅವನು 'ಲಕ್ಷ್ಮಣ, ಇವೇಕೆ ಪ್ರಾಣಿಗಳು ಭಯದಿಂದ ಓಡುತ್ತಿವೆಯಲ್ಲ? ಯಾರಾದರೂ ಬೇಟೆಗಾರರು ಅವನ್ನು ಅಟ್ಟಿಸಿಕೊಂಡು ಬಂದಿರುವರೇ ನೋಡು' ಎಂದನು. ಲಕ್ಷ್ಮಣನು ಒಂದು ದೊಡ್ಡ ಮರವನ್ನು ಹತ್ತಿ ಸುತ್ತಲೂ ನೋಡಿದನು. ಅವನಿಗೆ ಭರತನೂ ಅವನ ಸೈನಿಕರೂ ಗೋಚರಿಸಿದರು. ಲಕ್ಷ್ಮಣನು ಕೂಡಲೇ ಕೆಳಗಿಳಿದು ಬಂದು 'ಅಣ್ಣಾ, ಭರತನು ತನ್ನ ಸೈನ್ಯದೊಡನೆ ಇಲ್ಲಿಗೆ ಬರುತ್ತಿದ್ದಾನೆ. ಅವನಿಗಿನ್ನೂ ರಾಜ್ಯವೊಂದೇ ಸಾಲದೆಂದು ತೋರುತ್ತದೆ. ನಮ್ಮನ್ನು ಯುದ್ಧಮಾಡಿ ಸೋಲಿಸಬೇಕೆಂದು ಬರುತ್ತಿದ್ದಾನೆ. ಬರಲಿ; ನಾವಿಬ್ಬರೂ ಅವನನ್ನು ಸದೆಬಡಿಯೋಣ' ಎಂದನು. ಶ್ರೀರಾಮನು, "ಲಕ್ಷ್ಮಣ, ಸುಮ್ಮನೆ ಕೋಪಿಸಿಕೊಳ್ಳಬೇಡ. ಸರಿಯಾಗಿ ವಿಚಾರ ಮಾಡದೆ ಮಾತನಾಡಬೇಡ. ಕೇವಲ ಊಹೆಯಿಂದಲೇ ಇತರರು ಹೀಗೆ, ಹಾಗೆ ಎಂದು ಭಾವಿಸಬಾರದು. ಭರತನು ನಮ್ಮ ಮೇಲೆ ಯುದ್ಧಕ್ಕೆ ಬಂದಿದ್ದಾನೆಂದು ನಾವೇಕೆ ಯೋಚಿಸಬೇಕು? ಅವನು ಮಹಾ ಧಾರ್ಮಿಕ. ಭರತನ ಮನಸ್ಸು ನನಗೆ ಗೊತ್ತು. ಬಹುಶಃ ಅವನು ನಮ್ಮನ್ನು ಅಯೋಧ್ಯೆಗೆ ಕರೆದುಕೊಂಡು ಹೋಗಲು ಬಂದಿರಬಹುದು. ನಾವು ಕಾಡಿಗೆ ಬಂದಿರುವುದರಿಂದ ಅವನ ಮನಸ್ಸಿಗೆ ಬಹಳ ಬೇಸರವಾಗಿದೆ. ಅದಕ್ಕಾಗಿಯೇ ಅವನು ಇಲ್ಲಿಗೆ ಬಂದಿದ್ದಾನೆ. ಇದು ಖಂಡಿತ. ನಾವು ಅವನನ್ನು ಎದುರುಗೊಳ್ಳೋಣ. ಆದರದಿಂದ ಬರಮಾಡಿಕೊಳ್ಳೋಣ' ಎಂದು ಪರ್ಣಕುಟಿಯೊಳಗೆ ಬಂದನು. ಅದೇ ಸಮಯಕ್ಕೆ ಸರಿಯಾಗಿ ಭರತನೂ ಪರ್ಣಕುಟಿಯ ಬಳಿಗೆ ಬಂದನು. ದರ್ಭಾಸನದ ಮೇಲೆ ಕುಳಿತಿದ್ದ ಶ್ರೀರಾಮ ಸೀತೆಯರನ್ನು ನೋಡಿದನು. ಅವನಿಗೆ ಸಂತೋಷ, ಸುಖ, ದುಃಖ, ಅಳು ಎಲ್ಲವೂ ಒಟ್ಟಿಗೆ ಬಂದವು. ಅವನ ಮೈ ನಡುಗಿತು, ಗಂಟಲ ನರಗಳು ಉಬ್ಬಿದವು. ಕಣ್ಣು ಮಂಜು ಮಂಜಾಯಿತು. ಶ್ರೀರಾಮನ ಪಾದಗಳನ್ನು ಮುಟ್ಟಲೆಂದು ಬೇಗ ಬೇಗನೆ ಹೆಜ್ಜೆ ಹಾಕಿದನು. ಆದರೆ ಭಾವೋದ್ರೇಕದಿಂದ ಹಾಗೆಯೇ ಕುಸಿದುಬಿದ್ದು ಮೂರ್ಛೆ ಹೋದನು. ಶ್ರೀರಾಮನು ಓಡಿ ಬಂದು ಭರತನನ್ನು ಎಬ್ಬಿಸಿದನು. ಭರತನು ಎಚ್ಚರಗೊಂಡು ಗಟ್ಟಿಯಾಗಿ ಅಳುತ್ತ ಶ್ರೀರಾಮನ ಪಾದ ಮುಟ್ಟಿ ನಮಸ್ಕರಿಸಿದನು. ಶ್ರೀರಾಮನು ತಮ್ಮನನ್ನು ಬರಸೆಳೆದು ಅಪ್ಪಿಕೊಂಡನು. ಅಲ್ಲಿದ್ದವರ ಮನಸ್ಸನ್ನು ಆ ದೃಶ್ಯ ಕಲಕಿಬಿಟ್ಟಿತು. ಎಲ್ಲರ ಕಣ್ಣಿನಲ್ಲೂ ಕಂಬನಿ ಒಸರಿತು.

ಶ್ರೀರಾಮನು ನಾರುಮಡಿಯನ್ನುಟ್ಟು ಜಟಾಧಾರಿಯಾಗಿದ್ದ ಭರತನನ್ನು ಕುರಿತು, 'ಭರತ, ಇದೇನು? ಕಾಡಿಗೇಕೆ ಬಂದೆ? ತಂದೆಯವರೆಲ್ಲಿ? ಅವರ

ಆರೋಗ್ಯ ಹೇಗಿದೆ? ಅವರಿಗೆ ಸರಿಯಾಗಿ ಉಪಚಾರ ನಡೆಯುತ್ತಿದೆಯಷ್ಟೆ ?' ಎಂದು ಕೇಳಿದನು. ಭರತನು ಮುಖೋಲ್ಲಾಸದಿಂದ ಹಾಗೆಯೇ ಕುಳಿತಿರಲು ಶ್ರೀರಾಮನು ವಾತ್ಸಲ್ಯದಿಂದ ಅವನ ಮೈದಡವುತ್ತಾ ರಾಜನೀತಿಯನ್ನು ಬೋಧಿಸಿದನು. 'ಭರತ, ಕುಲಪುರೋಹಿತರಿಗೆ ಗೌರವವನ್ನು ತೋರಿಸುತ್ತಿರುವೆಯಷ್ಟೆ? ರಾಜ್ಯದಲ್ಲಿ ಎಲ್ಲರನ್ನೂ ಆದರದಿಂದ ಕಾಣುತ್ತಿರುವೆಯಾ ? ಶೂರರೂ, ವಿದ್ಯಾವಂತರೂ, ಯೋಗ್ಯರೂ, ಇತರರ ಮನಸ್ಸನ್ನು ಅರ್ಥಮಾಡಿಕೊಳ್ಳಬಲ್ಲವರೂ ಆದವರನ್ನೇ ಮಂತ್ರಿಯಾಗಿ ನಿಯಮಿಸು. ರಾಜನು ಯಾವಾಗಲೂ ತಾನೇ ನಿರ್ಣಯಗಳನ್ನು ತೆಗೆದುಕೊಳ್ಳಬಾರದು. ಅದಕ್ಕಾಗಿ ಮಂತ್ರಿಗಳೊಡನೆ ಸಮಾಲೋಚಿಸಬೇಕು. ಇದರಿಂದ ಪರಸ್ಪರ ವಿಚಾರ ವಿನಿಮಯ ನಡೆದು, ಎಲ್ಲರ ಅಭಿಪ್ರಾಯವೂ ವ್ಯಕ್ತವಾಗುತ್ತದೆ. ಎಲ್ಲರಿಗೂ ಒಪ್ಪಿಗೆಯಾಗುವಂತಹ ನಿರ್ಣಯವನ್ನು ಕೈಗೊಳ್ಳಬಹುದು. ಆದರೆ ಮಂತ್ರಾಲೋಚನೆ ಮಾಡಿದ ವಿಷಯ ರಹಸ್ಯವಾಗಿರಬೇಕು.'

'ಭರತ, ಪಂಡಿತರನ್ನು ಆದರಿಸು; ಸಾವಿರ ಮೂರ್ಖರಿದ್ದರೂ ರಾಜನಿಗೆ ಅವರಿಂದ ಉಪಯೋಗವಿಲ್ಲ. ಅವರ ಬದಲು ದಕ್ಷನೂ, ವೀರನೂ, ಮೇಧಾವಿಯೂ ರಾಜ್ಯಶಾಸ್ತ್ರವಿಶಾರದನೂ ಆದ ಒಬ್ಬ ಸಚಿವನಿದ್ದರೂ ಸಾಕು. ಅವನು ರಾಜ್ಯದ ಆಡಳಿತವನ್ನು ಸುಗಮವಾಗಿ ನಡೆಸಬಲ್ಲ. ಉತ್ತಮ ಅಧಿಕಾರಿಗೆ ದೊಡ್ಡ ಕೆಲಸಗಳನ್ನು ಕೊಡು, ಮಧ್ಯಮರಿಗೆ ಸಾಮಾನ್ಯವಾದ ಕೆಲಸಗಳನ್ನು ಕೊಡು. ನಿಪುಣರಲ್ಲದವರಿಗೆ ಸಣ್ಣ ಪುಟ್ಟ ಕೆಲಸಗಳನ್ನು ಕೊಡು. ನಿನ್ನ ಅಮಾತ್ಯರು ಪ್ರಾಮಾಣಿಕರಾಗಿರಲಿ. ಅವರು ಲಂಚರುಷವತ್ತುಗಳನ್ನು ತೆಗೆದುಕೊಳ್ಳಬಾರದು. ತಮ್ಮ ಬಂಧು ಬಳಗದವರಿಗಾಗಿ ಅಧಿಕಾರವನ್ನು ದುರುಪಯೋಗಪಡಿಸಿಕೊಳ್ಳಬಾರದು. ನೀನೇ ಒಂದು ವೇಳೆ ಪ್ರಜೆಗಳಿಗೆ ತೊಂದರೆ ಕೊಟ್ಟರೂ, ಮಂತ್ರಿಗಳು ಅದನ್ನು ಖಂಡಿಸಬೇಕು. ಅವರು ನಿನ್ನ ಹೊಗಳುಭಟ್ಟರಾಗಬಾರದು.'

'ಭರತ, ಪ್ರಜೆಗಳನ್ನು ಪ್ರೀತಿ ವಿಶ್ವಾಸಗಳಿಂದ ಕಾಣು. ನಿನ್ನ ಪ್ರಜೆಗಳು ಧರ್ಮಿಷ್ಠರೇ, ಸತ್ಯಮಾರ್ಗದಲ್ಲಿ ನಡೆಯುತ್ತಿದ್ದಾರೆಯೇ ಎಂಬುದನ್ನು ಗಮನಿಸಬೇಕು. ರೋಗವನ್ನು ಗುಣಪಡಿಸದೆ ಬರೀ ಹಣವನ್ನೆ ಕೇಳುವ ವೈದ್ಯನನ್ನೂ, ಕೃತಜ್ಞತೆಯಿಲ್ಲದೆ ಯಜಮಾನನನ್ನೇ ಬೈಯ್ಯುವ ಸೇವಕನನ್ನೂ, ಬಡವರ ಹೊಟ್ಟೆಯ ಮೇಲೆ ಹೊಡೆದು ಹಣ ಸಂಪಾದಿಸುವವರನ್ನೂ ನಿರ್ದಾಕ್ಷಿಣ್ಯವಾಗಿ ದಂಡಿಸು. ದೇಶದ್ರೋಹಿಗಳ ಚಟುವಟಿಕೆಯನ್ನು ಕಂಡುಹಿಡಿಯಲು ಗೂಢಚಾರರನ್ನು ನೇಮಿಸು. ಸೈನ್ಯವನ್ನು ಎಂದಿಗೂ ಉಪೇಕ್ಷಿಸಬೇಡ. ದೇಶದ ಗಡಿಗಳನ್ನು ರಕ್ಷಿಸುವವರು ಅವರು. ಯುದ್ಧದಲ್ಲಿ ತಮ್ಮ ಪ್ರಾಣವನ್ನೇ ಪಣವಾಗಿಟ್ಟು ಕಾದಾಡುವವರು. ಸೈನಿಕರನ್ನು ಎಲ್ಲರೂ ಗೌರವಿಸಬೇಕು. ನಿನ್ನ ಸೇನಾಧಿಪತಿಯು ಸಮರ್ಥನಾಗಿರಲಿ. ಅವನು ಅತ್ಯಂತ ಶ್ರೇಷ್ಠ ರಾಜಭಕ್ತನಾಗಿರಬೇಕು. ತನ್ನ ದೇಶದ ಬಗ್ಗೆ ಉತ್ಕಟ ಅಭಿಮಾನವನ್ನು ಹೊಂದಿರಬೇಕು.'

ನಿನ್ನ ಸೈನಿಕರಿಗೂ, ಸೇವಕರಿಗೂ ವೇತನಗಳನ್ನು ನಿಗಧಿಯಾದ ಕಾಲಕ್ಕೆ ಕೊಡುತ್ತಿರು. ವೇತನವನ್ನು ಕಮ್ಮಿ ಮಾಡುವುದಾಗಲಿ, ತಡವಾಗಿ ಕೊಡುವುದಾಗಲೀ ಬೇಡ. ನಮ್ಮನ್ನೇ ನಂಬಿರುವ ಜನಕ್ಕೆ ಎಂದಿಗೂ ತೊಂದರೆ ಕೊಡಬೇಡ.'

'ರಾಜ್ಯವನ್ನಾಳಲು ನಿನಗೆ ಹೆಚ್ಚು ತೊಂದರೆಯಾಗುವುದಿಲ್ಲ. ಏಕೆಂದರೆ ಅಯೋಧ್ಯೆಯ ಪ್ರಜೆಗಳು ತಮ್ಮ ನಾಗರಿಕ ಹೊಣೆಗಳನ್ನರಿತವರು. ಅಯೋಧ್ಯೆಯ ತುಂಬ ದೇವಸ್ಥಾನಗಳಿವೆ. ಅರವಟ್ಟಿಗೆಗಳೂ, ಸರೋವರಗಳೂ, ಅಸಂಖ್ಯಾತವಾಗಿವೆ. ಎಲ್ಲರಿಗೂ ಜಮೀನಿದೆ; ಕೃಷಿಯು ಚೆನ್ನಾಗಿ ನಡೆಯುತ್ತದೆ. ದನಕರುಗಳನ್ನೂ ಸಾಕಿದ್ದಾರೆ. ಕೃಷಿಯಿಂದ ಜೀವನ ಸಾಗಿಸುವವರು, ಗೋಪಾಲಕರು, ನಿನ್ನ ಪ್ರೀತಿಗೆ ಪಾತ್ರರಾಗಿದ್ದಾರೆ ತಾನೇ? ಏಕೆಂದರೆ, ದೇಶದ ಅಭಿವೃದ್ಧಿ ಇವರುಗಳಿಂದಲೇ ಸಾಧ್ಯ. ವಾಣಿಜ್ಯ ಉದ್ಯಮದಿಂದ ದೇಶವು ಪ್ರಗತಿಯನ್ನು ಹೊಂದುತ್ತದೆ. ಆದರೆ ದೇಶದ ಆರ್ಥಿಕ ಪರಿಸ್ಥಿತಿಯು ಏರುಪೇರಾಗದಂತೆ ಜಾಗ್ರತೆ ವಹಿಸು.'

ವಿವಿಧ ಜಾತಿಮತಗಳ ಜನರು ಪರಸ್ಪರ ಹೊಂದಿಕೊಂಡಿದ್ದಾರೆಯೇ ? ಸಾರ್ವಜನಿಕ ಉತ್ಸವಗಳು ಸಮಾರಂಭಗಳು ನಡೆಯುತ್ತಿವೆಯಷ್ಟೆ? ಇಂತಹ ಸಾಮೂಹಿಕ ಸಮಾರಂಭಗಳಿಂದಲೇ ಎಲ್ಲ ಜನರಿಗೂ ಪರಸ್ಪರ ಪ್ರೀತಿ, ಆದರ, ವಿಶ್ವಾಸಗಳು ಹುಟ್ಟುತ್ತವೆ. ನಾವೆಲ್ಲ ಒಂದೇ ಮನೆಯವರು ಎಂಬ ಭಾವನೆ ಮೂಡುತ್ತದೆ.'

'ಭರತ, ನಿನ್ನ ರಾಜ್ಯದಲ್ಲಿ ಕಳ್ಳರಿಗೆ ತಕ್ಕ ಶಿಕ್ಷೆಯಾಗುತ್ತಿದೆಯಷ್ಟೆ ? ಬಡವನಿಗೂ ಶ್ರೀಮಂತನಿಗೂ ವಿವಾದವಾದಾಗ, ನಿನ್ನ ಮಂತ್ರಿಗಳು ದುಡ್ಡಿನ ಆಸೆಗಾಗಿ ಶ್ರೀಮಂತನ ಪಕ್ಷವಹಿಸಿದಂತೆ ಜಾಗರೂಕನಾಗಿರುವೆ ತಾನೆ ? ರಾಜ್ಯದಲ್ಲಿ ಯಾರಿಗೂ ಅನ್ಯಾಯ ಆಗಬಾರದು. ನ್ಯಾಯಾಧೀಶರು ವಿಚಾರಣೆಯನ್ನು ನಡೆಸಿ, ನಿಷ್ಪಕ್ಷಪಾತದಿಂದ ತೀರ್ಮಾನಕ್ಕೆ ಬರಬೇಕು. ಯಾವ ರಾಜ್ಯದಲ್ಲಿ ಪ್ರಜೆಗಳು ಅನ್ಯಾಯದಿಂದ ನರಳುವರೋ ಅಂತಹ ರಾಜ್ಯ ಎಂದಿಗೂ ಶ್ರೇಯಸ್ಸನ್ನು ಹೊಂದಲಾರದು.'

'ರಾಜನು ಹದಿನಾಲ್ಕು ತಪ್ಪುಗಳನ್ನು ಮಾಡುವ ಸಂದರ್ಭಗಳಿರುತ್ತವೆ. ನಾಸ್ತಿಕ ಬುದ್ಧಿ -- ಎಂದರೆ ದೇವರಲ್ಲಿ ನಂಬಿಕೆ ಇಲ್ಲದಿರುವುದು. ಸುಳ್ಳು ಹೇಳುವುದು. ಕಾರಣವಿಲ್ಲದೆ ಕೋಪಿಸಿಕೊಳ್ಳುವುದು, ಎಚ್ಚರಿಕೆಯಿಲ್ಲದಿರುವುದು, ಸೋಮಾರಿಯಾಗಿ ಇರುವುದು, ಒಳ್ಳೆಯವರೊಡನೆ ಸಂಬಂಧ ಬೆಳೆಸದಿರುವುದು. ಸುಖಲೋಲುಪತೆಯಲ್ಲಿ ಮಗ್ನನಾಗಿರುವುದು. ಕೆಲಸವನ್ನು ನಿಧಾನ ಮಾಡುವುದು ; ಮಂತ್ರಿಗಳೊಡನೆ ವಿಚಾರ ಮಾಡದೆ ತಾನೇ ನಿರ್ಧಾರಗಳನ್ನು ತೆಗೆದುಕೊಳ್ಳುವುದು; ಅವಿವೇಕಿಗಳೊಡನೆ ರಾಜಕಾರಣವನ್ನು ಚರ್ಚಿಸುವುದು; ನಿಶ್ಚಯಿಸಿದ ಕಾರ್ಯಗಳನ್ನು ಆರಂಭಿಸದಿರುವುದು; ದೇಶದ ಹಿತದೃಷ್ಟಿಯಿಂದ ರಹಸ್ಯವಾಗಿರಬೇಕಾದ ಸಂಗತಿಗಳನ್ನು ಬಹಿರಂಗಪಡಿಸುವುದು; ಮಂಗಳಕರವಾದ ಕಾರ್ಯಗಳನ್ನು ಮಾಡದಿರುವುದು; ಎಲ್ಲ ಶತ್ರುಗಳ ಮೇಲೂ ಒಟ್ಟಿಗೆ ಯುದ್ಧವನ್ನು ಆರಂಭಿಸುವುದು. ಈ ಹದಿನಾಲ್ಕು ರಾಜದೋಷಗಳು. ಇವಕ್ಕೆ ಅವಕಾಶಕೊಡಬೇಡ.'

'ಮೃಷ್ಟಾನ್ನ ಭೋಜನಗಳನ್ನು ನೀನೊಬ್ಬನೇ ತಿನ್ನಬೇಡ. ಹಲವಾರು ಜನರಿಗೆ ಹಂಚಿ, ಅವರೊಂದಿಗೆ

ಊಟ ಮಾಡು. ರಾಜನಿಗೆ ಬಾಹುಬಲವೂ ಬೇಕು. ಜತೆಗೆ ಬುದ್ಧಿಬಲವೂ ಬೇಕು. ಅಂತಹ ರಾಜನು ಇಡೀ ಭೂಮಂಡಲವನ್ನೇ ಆಳಬಲ್ಲ; ತನ್ನ ಪ್ರಜೆಗಳನ್ನು ಸರಿಯಾಗಿ ಪಾಲಿಸಬಲ್ಲ. ಭರತ, ನೀನು ಆ ರೀತಿ ರಾಜ್ಯ ಆಳಬೇಕು. ನಮ್ಮ ವಂಶದ ಹಿರಿಯರು ರಾಜ್ಯ ಆಳಿದ್ದು ಹೀಗೆಯೇ. ನಿನ್ನಿಂದ ನಮ್ಮ ವಂಶದ ಕೀರ್ತಿ ಸೂರ್ಯಚಂದ್ರರಿರುವವರೆಗೆ ಬೆಳಗಬೇಕು' ಎಂದು ಭರತನ ಬೆನ್ನು ಚಪ್ಪರಿಸಿದನು.

ಭರತನಿಗೆ ಇನ್ನು ತಡೆದುಕೊಳ್ಳಲು ಸಾಧ್ಯವಾಗಲಿಲ್ಲ. ಕಣ್ಣೀರ ಕೋಡಿ ಹರಿಯುತ್ತಿರಲು, ಗದ್ಗದಿತನಾಗಿ 'ಅಣ್ಣಾ, ನಾನು ಧರ್ಮಭ್ರಷ್ಟ, ನನಗೇಕೆ ರಾಜಧರ್ಮವನ್ನು ಬೋಧಿಸುವೆ? ನಾನು ರಾಜನಾಗಿಲ್ಲ. ಆ ಯೋಗ್ಯತೆ ನನಗೆ ಇಲ್ಲವೂ ಇಲ್ಲ. ನೀನು ನನ್ನೊಡನೆ ಅಯೋಧ್ಯೆಗೆ ಬಾ. ರಾಜನಾಗಿ ನಮ್ಮನ್ನು ಆಳು. ಈಗ ಅಯೋಧ್ಯೆ ರಾಜನಿಲ್ಲದ ರಾಜ್ಯವಾಗಿದೆ. ದಶರಥಮಹಾರಾಜನು ನಿನ್ನ ವಿಯೋಗದಿಂದ ಮರಣ ಹೊಂದಿದ. ಕೊನೆಯ ಘಳಿಗೆಯವರೆಗೂ ಮಹಾರಾಜನು ನಿನ್ನನ್ನೇ ಧ್ಯಾನಿಸುತ್ತಿದ್ದನಂತೆ. ತಂದೆಯ ಮರಣ ಸಮಯದಲ್ಲಿ ನಾನೂ ಸಮೀಪದಲ್ಲಿರಲಿಲ್ಲ' ಎಂದನು. ತಂದೆಯ ಮರಣದ ಸುದ್ದಿಯನ್ನು ಕೇಳಿ ಶ್ರೀರಾಮ ಎಚ್ಚರ ತಪ್ಪಿದನು. ಭರತ ಲಕ್ಷ್ಮಣರು ಅವನನ್ನು ಉಪಚರಿಸಿ ಎಚ್ಚರಗೊಳಿಸಿದರು. ಶ್ರೀರಾಮ ತಂದೆಯ ಗುಣಗಾನ ಮಾಡುತ್ತಾ ಅವರ ಅನಿರೀಕ್ಷಿತ ಮರಣಕ್ಕಾಗಿ ಶೋಕಿಸಿದನು. ದಶರಥನ ಮರಣದ ವಾರ್ತೆಯನ್ನು ಕೇಳಿ ಲಕ್ಷ್ಮಣ ಸೀತೆಯರಿಗೂ ಅತೀವ ದುಃಖವಾಯಿತು. ಭರತನೇ ಅವರೆಲ್ಲರನ್ನೂ ಸಂತೈಸಿದರು. ಶ್ರೀರಾಮ ಲಕ್ಷ್ಮಣರು ತಂದೆಗೆ ತರ್ಪಣವನ್ನು ಅರ್ಪಿಸಿದರು.

ಇತ್ತ ಕೌಸಲ್ಯೆ ಮುಂತಾದವರಿಗೂ, ಸೈನಿಕರಿಗೂ, ಪುರಜನರಿಗೂ ಶ್ರೀರಾಮನನ್ನು ಕಾಣಬೇಕೆಂಬ ತವಕ ಹೆಚ್ಚಿ ಎಲ್ಲರೂ ಪರ್ಣಕುಟಿಯ ಬಳಿಗೆ ಬಂದರು. ಪುರಜನರು ಶ್ರೀರಾಮನಿಗೆ ಅಡ್ಡಬಿದ್ದರು. ಶ್ರೀರಾಮನು ತಾಯಂದಿರಿಗೂ ವಸಿಷ್ಠರಿಗೂ ನಮಸ್ಕರಿಸಿದನು. ಅವರೆಲ್ಲ ಪರಸ್ಪರ ಆಲಂಗಿಸಿಕೊಳ್ಳುತ್ತ, ಒಂದೇ ಸಮಯದಲ್ಲಿ ಸುಖದುಃಖಗಳನ್ನು ಅನುಭವಿಸುತ್ತ ಕಂಬನಿ ಸುರಿಸುತ್ತಿದ್ದುದು ಒಂದು ಅಪರೂಪದ ದೃಶ್ಯವಾಗಿತ್ತು.

ಎಲ್ಲರೂ ಅಲ್ಲಿಯೇ ಕುಳಿತುಕೊಂಡರು. ಪರಸ್ಪರ ಯೋಗಕ್ಷೇಮಗಳನ್ನು ವಿಚಾರಿಸಿದರು. ಆಗ ಶ್ರೀರಾಮನ ದೃಷ್ಟಿ ಭರತನ ಉಡುಪಿನ ಕಡೆ ಹರಿಯಿತು. ಭರತನು ರಾಜನಿಗೆ ಉಚಿತವಾದ ಪೋಷಾಕನ್ನು ಧರಿಸಿರಲಿಲ್ಲ. ಬದಲು ನಾರುಮಡಿಯುಟ್ಟಿದ್ದನು. ತಪಸ್ವಿಗಳಂತೆ ಜಟೆಯನ್ನು ಬೆಳೆಸಿದ್ದನು. ಚರ್ಮವನ್ನು ಹೊದ್ದಿದ್ದನು. ಶ್ರೀರಾಮನು ಆಶ್ಚರ್ಯದಿಂದ "ಭರತ, ಇದೇನು ? ನಿನ್ನ ವೇಷದಲ್ಲೇಕೆ ಇಷ್ಟೊಂದು ಬದಲಾವಣೆ?" ಎಂದು ಕೇಳಿದನು. ಭರತನು "ಅಣ್ಣಾ, ನಾನು ಮೊದಲೇ ಹೇಳಿದಂತೆ, ತಂದೆಯವರು ಕಾಲವಾದರು. ನಮ್ಮ ತಾಯಿಯ ಪಾಪಬುದ್ಧಿಯಿಂದ ನೀನು ಕಾಡಿಗೆ ಬಂದಿದ್ದಿ. ಲಕ್ಷ್ಮಣನೂ ನಿನ್ನ ಜೊತೆ ಬಂದಿದ್ದಾನೆ. ಅಯೋಧ್ಯೆಯನ್ನು ಆಳುವುದಕ್ಕೆ ನನಗೇನು ಹಕ್ಕು ? ನಾನು ರಾಜ್ಯವನ್ನು ನಿನ್ನ ವಶಕ್ಕೆ ಕೊಡಲು ಬಂದಿದ್ದೇನೆ" ಎಂದನು. ಶ್ರೀರಾಮನು "ಭರತ, ನಿನ್ನ ತ್ಯಾಗಬುದ್ಧಿಗೆ ಮೆಚ್ಚಿದೆ. ಆದರೆ ನಾನು ಈಗ ಅಯೋಧ್ಯೆಗೆ ಬರಲಾರೆ. ಹದಿನಾಲ್ಕು ವರ್ಷ ಕಾಡಿನಲ್ಲಿ ಇರುತ್ತೇನೆಂದು ನಾನು ನಮ್ಮ ತಂದೆಗೂ ತಾಯಿಗೂ ಮಾತು ಕೊಟ್ಟಿದ್ದೇನೆ. ನಾನು ಹಾಗೆಯೇ ನಡೆಯುತ್ತೇನೆ. ಇನ್ನೊಂದು ಮಾತು ನೀನು ನಿಮ್ಮ ತಾಯಿಯನ್ನು ಬಹಳವಾಗಿ ನಿಂದಿಸುತ್ತಿದ್ದೀಯೆ. ಅದು ತಪ್ಪು. ನೀನು ಹಾಗೆ ಮಾಡಕೂಡದು" ಎಂದನು. ಅಲ್ಲಿ ನೆರೆದಿದ್ದವರು ತಂದೆಯ ಮಾತನ್ನು ನಡೆಸುತ್ತೇನೆಂಬ ಶ್ರೀರಾಮನ ನಿಷ್ಠೆಯನ್ನೂ, ಭರತನ ತ್ಯಾಗ ಬುದ್ಧಿಯನ್ನೂ ಕೊಂಡಾಡಿದರು. ಆಗಲೇ ಗಾಢವಾಗಿ ಕತ್ತಲು ಕವಿದಿದ್ದುದರಿಂದ ಎಲ್ಲರೂ ಹಾಗೆಯೇ ಮಲಗಿಕೊಂಡರು.

ಮರುದಿನ ಬೆಳಗಾದಾಗ, ಪ್ರಾತರ್ವಿಧಿಗಳನ್ನು ಮುಗಿಸಿ ಎಲ್ಲರೂ ಒಟ್ಟಿಗೆ ಕುಳಿತರು. ಆಗ ಭರತನು "ಅಣ್ಣಾ, ನಾನು ನಮ್ಮ ತಾಯಿಯ ಜೊತೆ ಮಾತನಾಡಿದ್ದೇನೆ. ಆಕೆಗೆ ಈಗ ಬುದ್ಧಿಬಂದಿದೆ. ತಾನು ಮಾಡಿದುದು ತಪ್ಪು ಎಂಬ ಅರಿವು ಮೂಡಿದೆ. ಆಕೆಯ ಒಪ್ಪಿಗೆಯ ಮೇರೆಗೆ ನಾನು ನಿನಗೆ ರಾಜ್ಯವನ್ನು ಒಪ್ಪಿಸುತ್ತಿದ್ದೇನೆ. ನೀನು ದಯವಿಟ್ಟು ರಾಜ್ಯವಾಳು. ರಾಜನಾಗಲು ನೀನೊಬ್ಬನೇ ಸಮರ್ಥ. ನನಗೆ ಆ ಸಾಮರ್ಥ್ಯವಿಲ್ಲ." ಎಂದನು.

ಶ್ರೀರಾಮನು "ಭರತ, ನಿನ್ನ ಮನಸ್ಸು ಬಹಳ ದೊಡ್ಡದು. ನಿನ್ನ ತ್ಯಾಗವನ್ನು ನಾನು ಮೆಚ್ಚುತ್ತೇನೆ. ಆದರೆ, ಮೊದಲೇ ಹೇಳಿದಂತೆ ನಾನು ಹದಿನಾಲ್ಕು ವರ್ಷ ವನವಾಸ ಮಾಡಲೇಬೇಕು. ಅದು ನನ್ನ ಕರ್ತವ್ಯ. ತಂದೆಯವರ ಮಾತನ್ನು ಪರಿಪಾಲಿಸಲೆಂದು ನಾನು ಇಲ್ಲಿಗೆ ಬಂದಿದ್ದೇನೆ. ನಾನು ಕಾಡಿಗೆ ಬಂದಿರುವುದು ನನ್ನ ಕರ್ತವ್ಯವನ್ನು ನಡೆಸಲೆಂದು. ಹಾಗೆಯೇ ನಿನ್ನ ಕರ್ತವ್ಯವನ್ನು ಪಾಲಿಸಲೆಂದು ನೀನು ರಾಜ್ಯವಾಳಬೇಕು.

"ತಂದೆಯವರು ಮರಣ ಹೊಂದಿದ್ದು ಬಹಳ ದುಃಖದ ಸಂಗತಿಯೇ ಸರಿ. ಆದರೆ ಎಲ್ಲರೂ ಎಂದಾದರೂ ಒಂದು ದಿನ ಸಾಯಲೇಬೇಕಷ್ಟೆ. ಆದುದರಿಂದ ಧೈರ್ಯತಂದುಕೋ. ಅಯೋಧ್ಯೆಗೆ ಹಿಂದಿರುಗು. ಧರ್ಮದಿಂದ ರಾಜ್ಯವಾಳು" ಎಂದನು.

ಭರತನು ಎಷ್ಟೇ ವಿಧದಿಂದ ಒತ್ತಾಯ ಮಾಡಿದರೂ ಶ್ರೀರಾಮ ತನ್ನ ನಿರ್ಧಾರವನ್ನು ಬದಲಾಯಿಸಲಿಲ್ಲ. ಆಗ ಭರತನು "ಅಣ್ಣಾ, ನಾನು ನಿರುಪಾಯನಾಗಿದ್ದೇನೆ. ನೀನು ಅಯೋಧ್ಯೆಗೆ ಬರುವುದಿಲ್ಲವೆಂದು ತಿಳಿದು ನನಗೆ ಬಹಳ ದುಃಖವಾಗಿದೆ. ಆದರೆ ಒಂದು ಮಾತು ಮಾತ್ರ ಖಂಡಿತ. ನಾನು ಸಿಂಹಾಸನವನ್ನು ಏರುವುದಿಲ್ಲ. ಅಣ್ಣಾ, ನೀನು ಧರಿಸಿರುವ ಪಾದುಕೆಗಳನ್ನು ಕೊಡು. ನಿನ್ನ ಪಾದುಕೆಗಳನ್ನು ಮುಂದಿಟ್ಟುಕೊಂಡು ನಾನು ರಾಜ್ಯಭಾರ ನಡೆಸುವೆನು. ನೀನು ಅಯೋಧ್ಯೆಯನ್ನು ಬಿಟ್ಟ ದಿನದಿಂದ ಹದಿನಾಲ್ಕು ವರ್ಷಕ್ಕೆ ಸರಿಯಾಗಿ ರಾಜಧಾನಿಗೆ ಹಿಂದಿರುಗಲೇ ಬೇಕು. ಇಲ್ಲದಿದ್ದರೆ ನಾನು ಬೆಂಕಿಯಲ್ಲಿ ಬಿದ್ದು ಪ್ರಾಣ ಬಿಡುವೆನು" ಎಂದನು.

ಶ್ರೀರಾಮನು ಭರತನಿಗೆ ತನ್ನ ಪಾದುಕೆಗಳನ್ನು ಕೊಟ್ಟನು. 'ಹದಿನಾಲ್ಕು ವರ್ಷವಾದ ಕೂಡಲೇ ಅಯೋಧ್ಯೆಗೆ ಹಿಂತಿರುಗುವೆನು' ಎಂದು ಮಾತು ಕೊಟ್ಟನು. ಭರತನು ಮತ್ತೊಮ್ಮೆ ಅಣ್ಣನಿಗೆ ನಮಸ್ಕಾರ ಮಾಡಿದನು. ಶ್ರೀರಾಮನ ಪಾದುಕೆಗಳನ್ನು ತಲೆಯಮೇಲಿಟ್ಟುಕೊಂಡು ಪರಿವಾರದೊಂದಿಗೆ ಅಯೋಧ್ಯೆಗೆ ಹೊರಟನು.

ಅಯೋಧ್ಯೆಗೆ ಹಿಂದಿರುಗಿದ ನಂತರ ಭರತನು ತನ್ನ ಮಂತ್ರಿಗಳನ್ನೂ, ಪುರೋಹಿತರನ್ನೂ ಕರೆದು 'ಮಾನ್ಯರೇ, ಇದು ನಮ್ಮ ಅಣ್ಣನ ಪಾದುಕೆಗಳು. ಇವುಗಳಿಗೆ ರಾಜಮರ್ಯಾದೆಯನ್ನು ಮಾಡಿರಿ. ಇದನ್ನು ಮುಂದಿಟ್ಟುಕೊಂಡು, ನಿಮ್ಮೆಲ್ಲರ ಮಾರ್ಗದರ್ಶನದಿಂದ ರಾಜ್ಯಭಾರವನ್ನು ನಡೆಸಲು ಪ್ರಯತ್ನಿಸುತ್ತೇನೆ. ನಮ್ಮ ಅಣ್ಣ ಹಿಂದಿರುಗುವವರೆಗೆ ನಾನು ನಂದಿಗ್ರಾಮದಲ್ಲಿರುತ್ತೇನೆ. ನಮ್ಮ ಅಣ್ಣನಂತೆಯೇ ನಾರುಮಡಿಯುಟ್ಟು ಜಟಾಧಾರಿಯಾಗುತ್ತೇನೆ. ಹಣ್ಣು ಹಂಪಲುಗಳೇ ನನ್ನ ಆಹಾರ. ನಾನು ನಮ್ಮ ಅಣ್ಣ ಹಿಂದಿರುಗುವುದನ್ನೇ ಎದುರು ನೋಡುತ್ತಿರುತ್ತೇನೆ" ಎಂದು ಹೇಳಿದನು. ಭರತನ ಮಾತುಗಳನ್ನು ಕೇಳಿ ಅವರೆಲ್ಲರ ಕಣ್ಣುಗಳಲ್ಲಿ ನೀರು ಬಂತು. ಅವರು ಅವನು ಹೇಳಿದಂತೆಯೇ ನಡೆಯಲು ಒಪ್ಪಿದರು. ಭರತನು ನಂದಿಗ್ರಾಮದಲ್ಲಿದ್ದುಕೊಂಡು ತಪಸ್ವಿಜೀವನವನ್ನು ನಡೆಸುತ್ತ ಧರ್ಮದಿಂದ ರಾಜ್ಯಭಾರ ನಡೆಸುತ್ತ ಬಂದ.

**ಎಳೆಯರ ರಾಮಾಯಣ ಪುಸ್ತಕದಿಂದ.**



# ಸಿರಿಗಂಗಾಜನಕ ಕೀರ್ತನಮಾಲೆ



---ಡಾ|| ಟಿ. ಎನ್. ನಾಗರತ್ನ.

೧

ಕರೆದುಕೊ ಕರೆದುಕೊ ಶ್ರೀಹರಿ
ಕರೆದುಕೊ ನನ್ನ --ಪ--

ಇರಲಾರೆನಿಲ್ಲಿ ಇದ್ದು ಭಂಗಪಡಲಾರೆ
ಕರುಣಾಕರ ನೀನಲ್ಲವೆ ನಿನ್ನ ಬಿರುದಲ್ಲವೆ --ಅ.ಪ.--

ಲೆಕ್ಕಕ್ಕಿಲ್ಲ ಜಮಕ್ಕಿಲ್ಲ ದುಡಿಮೆಗುಂಟು
ಮಕ್ಕಳು ಮರಿಯೆಂಬ ಭ್ರಮೆಯಡಗಿತು ಅ
ಟ್ಟಿಕ್ಕಿದರೆ ಸಕ್ಕರೆ ಸವಿಮುತ್ತು ಮಾತಿನಲಿ ತೊ
ಟ್ಟಿಕ್ಕುವುದು ಸವಿಜೇನು
ಇಕ್ಕದಿರೆ ಲೆಕ್ಕಚುಕ್ತ --೧--

ಹಂಗಿನ ಬಾಳುವೆಗೆ ಕೊನೆಯೆಂದು ಎಲ್ಲಿ
ಇಂಗಿತವನರಿತಿರುವೆ ಇಚ್ಛೆಯಿಲ್ಲಿ
ಸಂಗೀತ ಸಾಹಿತ್ಯ ಕಲೆಯ ಕೊಲೆಮಾಡಿ
ಸಂಗಾತಿಯರಮನೆಯ ರಾಣಿ ನಾನು
ಕಂಗಾಲು ಕಂಬಗಳ ಸಾಲುಸಾಲು --೨--

ಎತ್ತ ಹೋದರೂ ಡಿಕ್ಕಿ ಸುತ್ತನೋಡಲು ಗಿರಕಿ
ಸತ್ತ ನರ ಮೆದುಳು ನೆನಪಿನ ಸುರುಳಿ
ಸುತ್ತಿರೆ ಅತ್ತರೂ ಇಲ್ಲ ನಕ್ಕರೂ ಇಲ್ಲ
ಮತ್ತೆ ಮಾಡಲಿ ಏನು ಎಲ್ಲ ಸ್ವಯಂ ಕೃತ ಉ
ನ್ಮತ್ತ ಸಿರಿಗಂಗಾಜನಕ ಪ್ರಕೃತ --೩--

-----

೨

ಏನ ನೀಡಲಿ ನಿನಗೆ ನೈವೇದ್ಯ ಹರಿಯೆ --ಪ--

ಗಾನಲೋಲನೆ ಎಲ್ಲ ಕಲಬೆರಕೆ ಸರಕು
ಪಾನ ಮಾಡಲು ಕೂಡ ಕ್ಲೋರಿನ್ ನೀರು --ಅ.ಪ--

ತೆಂಗು ಎಳೆಮೊಗರು ಎಳನೀರು ಒಗರು
ಕಂಗು ಕಕ್ಕಟ್ಟೆ ಮದಡು ಮದಡು
ರಂಗ ನಿನ್ನ ಪ್ರೀತಿಯ ಬಾಳೆಹಣ್ಣು
ರಂಗು ಕಳೆದುಳಿದ ಕರಿಕರಿ ಕಿಲುಬು --೧--
ತುಪ್ಪವೆಂದರೆ ಬಿಳಿಯ ನಂದಿನೀ ಮಾಲು
ಹೆಪ್ಪ ಹಾಕಲು ಹಾಲು ಬರಿನೀರು ಜೇನು-
ತುಪ್ಪವು ತಿಳಿ ಬೆಲ್ಲದ ತಿಳಿಪಾಕ ಸಕ್ಕರೆಯು
ಒಪ್ಪಿತೋ ಸಣ್ಣ ಮರಳು ಕಣಗಳ ನಡುವೆ --೨--

ಬಾದಾಮಿ ಉತ್ತತ್ತಿ ಬೆಲೆ ಹತ್ತಿದೆ ಮುಗಿಲಿಗೆ
ಗೋದಾಮು ತುಂಬಿದೆ ಅಕ್ಕಿಗೋಧಿರಾಗಿ
ಆದಾಯ ಕೇಳುವೆಯ ವಿದಾಯ ಹೇಳುವೆನು
ಗದಾಧರ ಸಿರಿಗಂಗಾಜನಕ ಇದೋ ಗುರುತಿನ ಚೀಟಿ --೩--

-----

೩

ನಿನ್ನ ಬಯಕೆಯು ಎನ್ನ ಕಾಡುತಿಹುದು ಬಂ
ದೆನ್ನ ನೀನೀಗ ಕೂಡೋ ಮುದದಿ --ಪ--

ಕಟ್ಟಿದ್ದ ಕಾಮದ ಒಡ್ಡು ಒಡೆದುಹೋಗಿದೆ
ನಿಷ್ಠೆಯನು ಉಳಿಸಿಕೊಡೋ ಪರಮಪುರುಷ ಹರಿ --ಅ.ಪ--

ನೋಡುವ ನೋಡಿ ಮಾತಾಡುವ ಬಯಕೆ
ಕಾಡುವ ಬೇಟದ ಕೂಟದ ಬಯಕೆ
ಓಡುವ ಮನ ಹದ್ದುಮೀರುತಲಿದೆ ಸಖ
ಬೇಡುತಲಿ ಮೈಮನಕೆ ಸುಖ --೧--

ಏರುತಿಹ ಮೈಬಿಸಿಯು ಜಾರುತಿಹ ಮನವು
ಸೇರಲು ತವಕಿಸುತಿದೆ ಹರಿಯೆ ನಿನ್ನ
ಮಾರನೊನಪು ವೈಯಾರ ನಿನ್ನ ನುಣ್ಪು ತಂಪು ಸಾ
ಕಾರವಾಯ್ತೆನ್ನ ಅರಿವಿನರಿವೆಯೊಳಗೆ --೨--

ಸುಖದ ಕಿಚ್ಚಲಿಬೆಂದೆ ಹುಚ್ಚುಹೊಳೆಯಲಿ ಮಿಂದೆ
ಸಖನೆ ಎಚ್ಚೆತ್ತೆ ಎತ್ತರಕೆ ಬೆಳೆದೆ
ನಖದ ಖತಿಯೆಲ್ಲ ಸುಖದ ಬುತ್ತಿಯಾಗಿದೆ
ಮುಖನೋಡಿ ನಗುತಿಹೆಯ ಸಿರಿಗಂಗಾಜನಕ --೩--

-----

೪

ಶ್ರೀಹರೀ ಶ್ರೀಹರೀ ನೀ ಹೌದೋ
ಮೋಹಕ ರೂಪಿನೊಡೆಯ --ಪ--

ಕಿವಿರು ಗುಬುಟು ಕೋರೆ ಮುಖವು
ನವಿರು ನಲಿವು ಬಿಟ್ಟ ಇರವು
ಕುವರ ಕೊಡಲಿ ಪಿಡಿದ ನಿಲುವು
ಪವನಸ್ಥ ತುಡುಗ ಪುಂಡ ರಾಹುತ --೧--

ಮತ್ಸ್ಯಕೂರ್ಮ ವರಾಹನೆನಿಸಿ
ವತ್ಸ ಪ್ರಹ್ಲಾದನ ಗೆಲಿಸಿ
ಕುತ್ಸಿತ ಬಲಿಯ ಕಳಿಸಿದ ಭಾರ್ಗವ ನಿ
ರ್ಮತ್ಸರಾ ಭೀರ ನಿರ್ವಾಸ ವಾರಾಹಾರೋಹಿ --೨--

ಕಣ್ಣಮುಚ್ಚ ಕಮಠ ಕಲಿಯು
ಮಣ್ಣ ಕೆದರಿ ನಿಲುವ ಹರಿಯು ಹಿ
ರಣ್ಯ ಕಶಿಪುವ ಬಡಿದ ಸಿರಿಗಂಗಾಜನಕ-ಭೃಗು
ಚೆಣ್ಣ ರಾಮ ಕೃಷ್ಣ ಬುದ್ಧ ಕಲ್ಕಿ --೩--

-----

# ತ್ಯಾಗರಾಜರ
# ರಾಮಾಯಣ ಪಾತ್ರಗಳು

---ಡಾ|| ವಿ. ಎಸ್. ಸಂಪತ್ಕುಮಾರಾಚಾರ್ಯ.

ಶ್ರೀಮದ್ರಾಮಾಯಣವು ಭಾರತದ ಆದಿಕಾವ್ಯ. ಭಾರತೀಯ ಸಾಹಿತ್ಯದಲ್ಲಿ ಇದು ಅತ್ಯಂತ ಹಿರಿಯ ಸ್ಥಾನವನ್ನು ಪಡೆದಿದೆ. ರಾಮಾಯಣ ಕಾವ್ಯವು ಭಾರತೀಯ ಸಂಸ್ಕೃತಿಯ ದ್ಯೋತಕವಾಗಿ ಬೆಳಗುತ್ತಿದೆ. ೨೪೦೦೦ ಶ್ಲೋಕಗಳಿಂದ ಕೂಡಿರುವ ಈ ಕೃತಿ ಸಂಸ್ಕೃತ ಸಾಹಿತ್ಯದಲ್ಲೇ ಅತ್ಯಂತ ಸರಳವಾದ, ಸುಮನೋಹರವಾದ ಶೈಲಿಯಲ್ಲಿ ಹೃದಯಂಗಮವಾಗಿ ವಿರಚಿಸಲ್ಪಟ್ಟಿದೆ. ಜನಸಾಮಾನ್ಯರಿಗೂ ಅರ್ಥವಾಗುವ ಶೈಲಿಯಲ್ಲಿ ಸರ್ವಶ್ರುತಿ ಮನೋಹರವಾದ ಮಹೋನ್ನತ ಕಾವ್ಯವನ್ನು ವಿರಚಿಸಿ ಮಹರ್ಷಿ ವಾಲ್ಮೀಕಿ ಅಜರಾಮರರಾಗಿದ್ದಾರೆ. ಸಹಸ್ರಾರು ವರ್ಷಗಳಿಂದ ಶ್ರೀಮದ್ರಾಮಾಯಣವನ್ನು ಹೇಳುತ್ತ, ಕೇಳುತ್ತ, ಹಾಡುತ್ತ, ಅಭಿನಯಿಸುತ್ತ ಬಂದಿದ್ದಾರೆ ಜನ. ಆದರೆ ಹೇಳಿದಷ್ಟೂ ಮತ್ತೆ ಮತ್ತೆ ಹೇಳಬೇಕು, ಕೇಳಬೇಕು ಎನಿಸುವಂತಿದೆ ಈ ಕಾವ್ಯ. ಆದಿಕಾವ್ಯವೂ ಪುರಾತನವೂ ಆದ ರಾಮಾಯಣ ನಿತ್ಯನೂತನವಾಗಿದೆ. ಈ ಕಾವ್ಯವು ಅನೇಕ ಭಾರತೀಯ ಮತ್ತು ವಿದೇಶೀ ಭಾಷೆಗಳಿಗೆ ಅನುವಾದಿತವಾಗಿದೆ. ಇದರಲ್ಲಿ ಬರುವ ಘಟನೆಗಳು ಉತ್ತರ, ದಕ್ಷಿಣ, ಪೂರ್ವ ಮತ್ತು ಪಶ್ಚಿಮ ಭಾರತದ ಹಲವು ಭಾಗಗಳಲ್ಲಿ ಸಂಭವಿಸಿದುವು.

ಮರ್ಯಾದಾ ಪುರುಷೋತ್ತಮನೆನಿಸಿದ ಶ್ರೀ ರಾಮಭದ್ರನ ದಿವ್ಯಚರಿತೆಯನ್ನು ಬಣ್ಣಿಸಲು, ವಾಲ್ಮೀಕಿಮುನಿ ಶ್ರೀಮದ್ರಾಮಾಯಣ ಕಾವ್ಯವನ್ನು ವಿರಚಿಸಿ ವಿಶ್ವವಿಖ್ಯಾತರಾಗಿದ್ದಾರೆ. ಇದಕ್ಕೆ ಕಾರಣ ಇದು ಉತ್ತಮ ಕಾವ್ಯವಾಗಿರುವುದರ ಜೊತೆಗೆ ಮೋಕ್ಷಶಾಸ್ತ್ರವೂ ಆಗಿ ಬೆಳಗುತ್ತಿರುವುದು. ರಾಮಾಯಣವು ಕೇವಲ ರಾಮಚಂದ್ರನ ಕಥೆ ಅಲ್ಲ. ಮಹಾಸಾಧ್ವೀಶಿರೋಮಣಿಯಾದ ಸೀತೆಯ ಭವ್ಯಚಾರಿತ್ರ್ಯವೂ ಹೌದು. 'ರಾಮಾಯಣಮಿದಂ ಕೃತ್ಸ್ನಂ ಸೀತಾಯಾಶ್ಚರಿತಂ ಮಹತ್' ಎಂದು ವಾಲ್ಮೀಕಿ ಮಹರ್ಷಿಗಳೇ ನುಡಿದಿದ್ದಾರೆ. ಈ ಕಾವ್ಯದಲ್ಲಿ ಶ್ರೀರಾಮನ ಶ್ರೇಷ್ಠ ಹಾಗೂ ಆದರ್ಶಕಲ್ಯಾಣ ಗುಣಗಳನ್ನು ವಾಲ್ಮೀಕಿ ಮುನಿ ಸುಂದರವಾಗಿ ನಿರೂಪಿಸಿದ್ದಾರೆ.

ಭಾರತದ ಅತ್ಯಂತ ಶ್ರೇಷ್ಠ ವಾಗ್ಗೇಯಕಾರರಾದ ತ್ಯಾಗರಾಜರು ಸಾವಿರಾರು ಕೃತಿಗಳನ್ನು ರಚಿಸಿ ರಾಮಾಯಣವನ್ನು ಹಾಡಿ ರಾಮಾಯಣದ ಮಹಾವಾಗ್ಗೇಯಕಾರರೆನಿಸಿಕೊಂಡಿದ್ದಾರೆ. ಅವರು ಚಿತ್ರಿಸಿರುವ ಶ್ರೀರಾಮನ ಮಾನವೀಯ ಮತ್ತು ದೈವಿಕವಾದ ಗುಣಗಳು ವರ್ಣನಾತೀತ. ವಾಲ್ಮೀಕಿ ರಾಮಾಯಣದ ಜೊತೆಗೆ ತುಳಸೀದಾಸರ ರಾಮಾಯಣ, ಕಂಬರಾಮಾಯಣ, ಅದ್ಭುತ ರಾಮಾಯಣ ಇತ್ಯಾದಿ ಹಲವು ರಾಮಾಯಣಗಳನ್ನು ಅರಿತಿದ್ದ ಅವರು ರಾಮಾಯಣದ ಹಲವಾರು ಘಟನೆಗಳನ್ನು ಸುಂದರವಾಗಿ ಚಿತ್ರಿಸಿದ್ದಾರೆ. ಮತ್ತು ಅವನ ಕಲ್ಯಾಣ ಗುಣಗಳನ್ನು ಹಲವು ರೀತಿಯಲ್ಲಿ ಮನ ಮೋಹಕವಾಗಿ ಚಿತ್ರಿಸಿದ್ದಾರೆ.

## ಶ್ರೀರಾಮನ ಮಾತು ಮಧುವಿನಂತೆ ಸಿಹಿ ಮತ್ತು ಅದ್ವಿತೀಯ

ತೋಡಿರಾಗದ ಏಮನಿ ಮಾಟ್ಲಾಡಿತಿವೋ ಎಂಬ ಕೃತಿಯಲ್ಲಿ ತ್ಯಾಗರಾಜರು ಈ ಪ್ರಶ್ನೆಯನ್ನು ಕೇಳಿದ್ದಾರೆ -- "ನಿನ್ನ ದರ್ಶನವನ್ನು ಪಡೆಯಲು ಬಂದ ನಾನಾ ಬಗೆಯ ಜನರೊಂದಿಗೆ ನೀನು ಹೇಗೆ ಸಂಭಾಷಿಸಿದೆ ? ನಿನ್ನನ್ನು ಭೇಟಿಮಾಡಿದವರೆಲ್ಲರೂ ತಮಗೆ ಒಳ್ಳೆಯದಾಗಿದೆ ಎಂದು ಭಾವಿಸಿದರು. ನಿನ್ನ ದರ್ಶನ ಮಾಡಲು ಬಂದವರು ಮೊದಲು ಸಂಕೋಚ ಹಾಗೂ ಭಯದಿಂದ ತೊದಲಿ, ನಿನ್ನ ಹಿತಕರವಾದ ಮಾತಿನಿಂದ ಧೈರ್ಯ ಪಡೆದು ತಮ್ಮ ಮನಸ್ಸಿನಲ್ಲಿದ್ದುದನ್ನು ಸ್ವಲ್ಪ ಹೊತ್ತಾದ ನಂತರ ಹೇಳಲು ಸಾಧ್ಯವಾಯಿತು. ಇದು ಸ್ವಾಭಾವಿಕ. ನೀನು ಆದರ್ಶ ಪುರುಷೋತ್ತಮ. ಮಾನವನ ಮನಸ್ಸನ್ನು ತಿಳಿದ ನೀನು, ನಿನ್ನನ್ನು ನೋಡಲು ಬಂದವರ ಮನಸ್ಸನ್ನು ಪೂರ್ವಭಾವಿಯಾಗೇ ತಿಳಿದು ಮೃದುಮಧುರವಾದ ಮಾತುಗಳಿಂದ ಉತ್ತರಿಸಿದೆ" ಎಂದಿದ್ದಾರೆ. ಮೃದು ಸುಭಾಷ (ರಾಮನೀ ಸಮಾನಮೆವರು -- ಖರಹರಪ್ರಿಯ) ಮೃದುವಾರ್ತಲು (ನಿನುವಿನ ಸುಖಮುಗಾನ -- ತೋಡಿ), ಮುದ್ದು ಮುದ್ದುಗ ಮಾಟಲಾಡಿನದಿ (ಸಾರ್ವಭೌಮ ಸಾಕೇತ -- ರಾಗ ಪಂಜರ) ಎಂಬ ಪದಗಳು ಗಮನಾರ್ಹವಾಗಿವೆ.

## ಶ್ರೀರಾಮನು ಸಂಗೀತ ರಸಿಕ

ವಾಲ್ಮೀಕಿ ಮಹರ್ಷಿಯು ರಾಮಾಯಣದಲ್ಲಿ ಹಲವು ಕಡೆ ಶ್ರೀರಾಮನು ಚಕ್ರವರ್ತಿಯಾಗಿ ಪಟ್ಟಾಭಿಷಿಕ್ತನಾಗಲು ಹೊಂದಿದ್ದ ಗುಣಗಳಲ್ಲಿ ಅವನಿಗಿದ್ದ ವಿಶೇಷ ಸಂಗೀತಜ್ಞಾನವೂ ಒಂದು ಎಂದು ಹೇಳಿದ್ದಾರೆ. ತ್ಯಾಗರಾಜರು ಶ್ರೀರಾಮನು ರಾಗರಸಿಕ ಎಂದು ನಿನುವಿನ ಸುಖಮುಗಾನ ಎಂಬ ತೋಡಿರಾಗದ ಕೃತಿಯಲ್ಲೂ, ಸಂಗೀತಪ್ರಿಯ (ರಕ್ಷದೆಟ್ಟರೇ -- ಭೈರವಿ), ಗಾನಲೋಲ (ವಾಚಾಮಗೋಚರಮೇ ಮನಸಾ -- ಕೈಕವಶಿ), ಮತ್ತು ಜಾನಕೀರಮಣ -- ಶುದ್ಧ ಸೀಮಂತಿನಿ), ಸಂಗೀತಲೋಲ (ಶ್ರೀರಘುವರಾಪ್ರಮೇಯ -- ಕಾಂಭೋಜಿ) -- ಎಂದು ಹೇಳಿರುವುದಲ್ಲದೆ ಅವನನ್ನು ರಸಿಕಶಿರೋಮಣಿ (ದಾಶರಥೇ ನೀ ಋಣಮು -- ತೋಡಿ) ಎಂದು ಹೇಳಿದ್ದಾರೆ. ಹೀಗೆ ಶ್ರೀರಾಮನನ್ನು ಕುರಿತು ಹೇಳಿರುವ ಕವಿಗಳಲ್ಲಿ ತ್ಯಾಗರಾಜರೇ ಮೊದಲಿಗರು.

## ಆಸ್ಥಾನದ ಶಿಷ್ಟಾಚಾರಪಾಲಕ

ಲವಕುಶರು ರಾಮಾಯಣವನ್ನು ಸಂಗೀತದೊಂದಿಗೆ ಸೊಗಸಾಗಿ ಶ್ರೀರಾಮನ ಆಸ್ಥಾನದಲ್ಲಿ ಇಪ್ಪತ್ತೊಂದು ದಿನಗಳ ಕಾಲ ಹಾಡಿದರು. ರಾಮನು ಈ ಕಾವ್ಯಗಾನದಿಂದ ಬಹು ಆಕರ್ಷಿತನಾಗಿ ಆ ಬಾಲಕರ ಸಮೀಪಕ್ಕೆ ಹೋಗಿ ಕುಳಿತು ಕೇಳಬೇಕೆಂದು ಆಶಿಸಿದನು. ಏಕ ಮನಸ್ಸಿನಿಂದ ಕೇಳುತ್ತಿದ್ದ ಇತರರಿಗೆ ತೊಂದರೆಯಾಗದಂತೆ, ಮೆಲ್ಲನೆ ಇತರರ ಗಮನವನ್ನು ಸೆಳೆಯದಂತೆ ಸಿಂಹಾಸನದಿಂದೆದ್ದು ಬಂದು ಮಕ್ಕಳ ಮುಂದೆ ಕುಳಿತು ಕೇಳಲಾರಂಭಿಸಿದ. ಸಂಗೀತಮಯವಾದ ವಾಚನವು ಮುಗಿದ ನಂತರ ರಾಮನು ಬಾಲಕರ ಸಮೀಪದಲ್ಲಿ ಕುಳಿತಿರುವುದನ್ನು ಅಲ್ಲಿದ್ದ ಸಭಿಕರು ಗಮನಿಸಿದರು. ತಮ್ಮ ಗಮನ ಸೆಳೆಯದೆ ಬಾಲಕರ ಸಮೀಪಕ್ಕೆ ಹೋಗಿ ಅವನು ಕುಳಿತುದನ್ನು ತಿಳಿದು ಅವರು ಅತ್ಯಾಶ್ಚರ್ಯಗೊಂಡರು.

## ಸೀತೆಯಲ್ಲಿ ಅಪಾರ ಪ್ರೇಮ

ಶ್ರೀರಾಮನಿಗೆ ಸೀತೆಯಲ್ಲಿ ಅಪಾರವಾದ ಪ್ರೇಮವಿತ್ತೆಂಬುದು ಎಲ್ಲರಿಗೂ ತಿಳಿದ ವಿಷಯ. ತ್ಯಾಗರಾಜರು, ಹರಿಕಾಂಭೋಜಿ ರಾಗದ 'ಒಕಮಾಟ ಒಕ ಬಾಣಮು' -- ಎಂಬ ಕೃತಿಯಲ್ಲಿ ಅವನ ಕಲ್ಯಾಣ ಗುಣಗಳನ್ನು ಕುರಿತು, "ಒಕಮಾಟ, ಒಕಬಾಣಮು, ಒಕಪತ್ನೀವ್ರತುಡೆ ಮನಸಾ, ಒಕ ಚಿತ್ತಮು ಗಲ ವಾಡೇ" ಎಂದು ಹೇಳಿದ್ದಾರೆ.

## ಹಿರಿಯರಲ್ಲಿ ಗೌರವ

ಶ್ರೀರಾಮನು ವನವಾಸದಿಂದ ಹಿಂತಿರುಗಿದ ಕೂಡಲೇ ಮಾಡಿದ ಮೊದಲ ಕೆಲಸವೇನೆಂದರೆ ಕೈಕೇಯಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿ, ತನಗೆ ರಾವಣಾರಿ -- ಇತ್ಯಾದಿ ಕೀರ್ತಿ ಲಭಿಸಲು

ಅವಳೇ ಕಾರಣವೆಂದು ಹೇಳಿದನು. ಇನ್ಯಾವ ವ್ಯಕ್ತಿಯಾಗಿದ್ದರೂ ಈ ರೀತಿ ನಡೆದುಕೊಳ್ಳುತ್ತಿರಲಿಲ್ಲ.

ಕೊಟ್ಟಮಾತಿನಂತೆ ನಡೆಯುವುದು ಶ್ರೀರಾಮನ ಮತ್ತೊಂದು ಹಿರಿಯ ಗುಣ. 'ರಾಮೋದ್ವಿರ್ನಾಭಿಭಾಷತೇ'--ರಾಮನು ಎರಡು ಮಾತಾಡುತ್ತಿರಲಿಲ್ಲ. 'ಆಡಿನ ಮಾಟಲು ದಪ್ಪಡನುಚುನು. ಆ ಚಂದ್ರಾರ್ಕಮುಗ ಗೀರ್ತಿಗಲಿಗಿನ ವಾಡೇರಾ ದೈವಮು' -- "ಅಡಿದ ಮಾತಿಗೆ ತಪ್ಪದೆ ನಡೆದುಕೊಂಡು ಶಾಶ್ವತವಾದ ಕೀರ್ತಿಯನ್ನು ಪಡೆದಿರುವ ಅವನೊಬ್ಬನೇ ದೇವರು" ಎಂದು ತ್ಯಾಗರಾಜರು ಪಂತುವರಾಳಿರಾಗದ ವಾಡೇರಾದೈವಮು, ಮನಸಾ, ಎಂಬ ಕೃತಿಯಲ್ಲಿ ಹಾಡಿದ್ದಾರೆ. ಶ್ರೀರಾಮನ ಮತ್ತೊಂದು ಕಲ್ಯಾಣಗುಣ ನಿಜಭಕ್ತಪಾಲನೆ. ಇದಕ್ಕೆ ಶಬರಿಗೆ ಮೋಕ್ಷವಿತ್ತುದು ಒಂದು ಪ್ರಸಿದ್ಧ ನಿದರ್ಶನ. ಮತ್ತೊಂದು ಗುಣ ಅಪಾರ ಕರುಣೆ. ತ್ಯಾಗರಾಜರು ಶ್ರೀರಾಮನ ಈ ಗುಣವನ್ನು ಕುರಿತು ಕೇದಾರಗೌಳರಾಗದ ಕರುಣಾಜಲಧೇ ಮತ್ತು ದೇವಗಾಂಧಾರಿ ರಾಗದ ಕರುಣಾಸಮುದ್ರ ಎಂಬ ಕೃತಿಗಳಲ್ಲಿ ಹಾಡಿದ್ದಾರೆ. ಅವನು ಸುಗುಣನಿಧಿ ಎಂದು ನಾದನಾಮಕ್ರಿಯಾರಾಗದ 'ಕರುಣಾಜಲಧೇ' ಎಂಬ ಕೃತಿಯಲ್ಲೂ, ಸದ್ಗುಣಗಣಸಾಂದ್ರನೆಂದು ಪಾಹಿರಾಮಚಂದ್ರ ಎಂಬ ಶಂಕರಾಭರಣರಾಗದ ಕೃತಿಯಲ್ಲೂ, ಸುಗುಣ ಭೂಷಣನೆಂದು ಖಮಾಚ್ ರಾಗದ ಸುಜನ ಜೀವನ ಎಂಬ ಕೃತಿಯಲ್ಲೂ ಹಾಡಿದ್ದಾರೆ. ಗುರುಭಕ್ತಿಯು ಶ್ರೀರಾಮನ ಮತ್ತೊಂದು ಕಲ್ಯಾಣಗುಣ. ಗುರು ವಿಶ್ವಾಮಿತ್ರನು ಹೇಳಿದ ನಂತರವೇ ಶ್ರೀರಾಮನು ಜನಕನ ಆಸ್ಥಾನದಲ್ಲಿ ಶಿವಧನುಸ್ಸನ್ನು ತೆಗೆದುಕೊಂಡನು. ಆ ಸಮಯದಲ್ಲಿ ಶ್ರೀರಾಮನ ಸೌಂದರ್ಯವನ್ನು ಸುಂದರವಾಗಿ ತ್ಯಾಗರಾಜರು 'ಅಲಕಲಲ್ಲ' ಎಂಬ ಮಧ್ಯಮಾವತಿರಾಗದ ಕೃತಿಯಲ್ಲಿ ವರ್ಣಿಸಿದ್ದಾರೆ. ಪರಿಪಾಲಯಮಾಂ ಕೋದಂಡಪಾಣೇ ಎಂಬ ದರ್ಬಾರ್ ರಾಗದ ಕೃತಿಯಲ್ಲಿ ಶ್ರೀರಾಮನು 'ಅತ್ಯಂತ ಸುಂದರ, ನೃತ್ಯಜನಪ್ರಿಯ'ನೆಂದು ಹೇಳಿದ್ದಾರೆ.

## ಸೀತಾಮಾತೆ

ಸೀತಾಮಾತೆಯ ಪತಿಭಕ್ತಿ, ವಿವೇಕ, ಧೈರ್ಯ, ಸಹನೆ, ಗಾಂಭೀರ್ಯ, ದೈವಭಕ್ತಿ ಇವುಗಳೆಲ್ಲಾ ಭಾರತೀಯ ಸ್ತ್ರೀತ್ವದ ಪರಮ ಆದರ್ಶಗಳಾಗಿ ಇಂದಿಗೂ ಪೂಜಾರ್ಹವಾಗಿವೆ. ಸೀತೆಯು ಶೀಲಸೌಂದರ್ಯಗಳ ತೇಜೋರಾಶಿ. ಪುರುಷೋತ್ತಮನಾದ ಶ್ರೀರಾಮನನ್ನು ವರಿಸಿದ ಸಾಧ್ವೀಮಣಿ. ಆಕೆಯ ಪಾತ್ರವನ್ನು ಋಷಿಕವಿ ವಾಲ್ಮೀಕಿಯು ತಮ್ಮ ರಾಮಾಯಣದಲ್ಲಿ ಲೋಕೋತ್ತರವಾಗಿ ಚಿತ್ರಿಸಿ, ಮುಗಿಲು ಮುಟ್ಟಿಸಿದ್ದಾರೆ. "ಈ ಜಗತ್ತಿನಲ್ಲಿ ಶ್ರೀರಾಮನಂತವರು ನೂರಾರು ಮಂದಿ ಜನಿಸುವುದು ಸಾಧ್ಯವಾಗಬಹುದು. ಆದರೆ ಸೀತೆಯಂತಹ ಸಾಧ್ವಿಯು ಜನಿಸುವುದು ಅಸಂಭವ" ಎಂದಿದ್ದಾರೆ ಸ್ವಾಮಿ ವಿವೇಕಾನಂದರು.

ರಾಮಾಯಣದ ವಾಗ್ಗೇಯಕಾರರಾದ ಸದ್ಗುರು ತ್ಯಾಗರಾಜರು ತಮ್ಮ ಅನೇಕ ಕೃತಿಗಳಲ್ಲಿ ಆದರ್ಶಮಹಿಳಾರತ್ನಳಾದ ಸೀತಾಮಾತೆಯ ಗುಣಗಾನವನ್ನು ಮಾಡಿದ್ದಾರೆ. ಇವರು ರಾಮಾಯಣದ ವ್ಯಕ್ತಿಗಳನ್ನು ಚಿತ್ರಿಸುವಾಗ ಬಹುಪಾಲು ವಾಲ್ಮೀಕಿಯನ್ನೇ ಅನುಸರಿಸಿದ್ದಾರೆ. ಕೆಲವು ಸಂದರ್ಭಗಳಲ್ಲಿ ಇತರ ರಾಮಾಯಣಗಳಲ್ಲಿರುವ ಹಲವಾರು ಸನ್ನಿವೇಶಗಳನ್ನೂ ತಮ್ಮ ಕೃತಿಗಳಲ್ಲಿ ನಿರೂಪಿಸಿದ್ದಾರೆ. ಸೀತಾಮಾತೆಯ ಚಿತ್ರವನ್ನು ಅನೇಕ ಕೃತಿಗಳಲ್ಲಿ ಚಿತ್ರಿಸಿದ್ದಾರೆ. ಇವುಗಳಲ್ಲಿ ಕೆಲವನ್ನು ಉದಾಹರಿಸಬಹುದು.

### 'ಸರಿ ಎವ್ವರೇ? ಶ್ರೀ ಜಾನಕೀ!'

(ಶ್ರೀರಂಜನಿ ಆದಿ)

ಈ ಕೃತಿಯ ಅಭಿಪ್ರಾಯವು ಹೀಗಿದೆ :

"ಎಲೈ ಜಾನಕಿಯೇ! ಸದಾಕಾಲದಲ್ಲಿಯೂ ಪರಮಾತ್ಮನಾದ ಶ್ರೀರಾಮನ ಸಹವಾಸದಲ್ಲಿಯೇ ಇದ್ದು ಸೇವೆಯನ್ನು ಸಲ್ಲಿಸುತ್ತಾ, ಭಯಂಕರವಾದ ಕಾಡಿನಲ್ಲೂ ಅವನನ್ನು ಅನುಸರಿಸಿ, ಅವನಲ್ಲೇ ನೆಟ್ಟ ಮನಸ್ಸುಳ್ಳವಳಾಗಿ, ಅವನಿಗೆ ರಾಜಸುಖವನ್ನು ಉಂಟುಮಾಡಿದ ನಿನಗೆ ಯಾರುತಾನೇ ಸರಿಸಮಾನರು ?"

ಮಾ ಜಾನಕೀ ಚೇ ಬಟ್ಟಗ (ಕಾಂಭೋಜಿ -- ಆದಿ) :-- ಈ ಕೃತಿಯು ತ್ಯಾಗರಾಜ ವಿರಚಿತ 'ಸೀತಾರಾಮ ವಿಜಯ'ವೆಂಬ ಗೇಯನಾಟಕದಿಂದ ಆಯ್ದ ರಚನೆ. ಇದರ ಭಾವಾರ್ಥವು ಹೀಗಿದೆ :

ಎಲೈ ರಾಮನೇ! ನೀನು ರಾವಣಾರಿ ಎಂಬ ಬಿರುದನ್ನು ಪಡೆದದ್ದು ನಮ್ಮ ಜಾನಕಿಯನ್ನು ವಿವಾಹವಾದುದರಿಂದ. ಲೋಕಮಾತೆಯಾದ ಸೀತೆಯು ಮನಸ್ಸು ಮಾಡಿದ್ದರೆ ಕ್ಷಣಕಾಲದಲ್ಲಿ ರಾವಣನನ್ನು ತನ್ನ ಕ್ರೂರದೃಷ್ಟಿಯಿಂದ ಭಸ್ಮಮಾಡಬಹುದಾಗಿತ್ತು. ಆದರೆ ಹಾಗೆ ಮಾಡದೆ ನಿನ್ನ ಜೊತೆಯಲ್ಲಿ ಕಾಡಿಗೆ ಹೋಗಿ ನಿನ್ನ ಆಜ್ಞೆಯಂತೆ ತನ್ನ ನಿಜಸ್ವರೂಪವನ್ನು ಅಗ್ನಿಯಲ್ಲಿರಿಸಿ, ಮಾಯಾ ಸೀತೆಯ ಸ್ವರೂಪವನ್ನು ತಾಳಿ, ರಾವಣನ ಜೊತೆಯಲ್ಲಿ ಹೋಗಿ, ಲಂಕೆಯಲ್ಲಿ ಅಶೋಕ ವೃಕ್ಷದ ಅಡಿಯಲ್ಲಿ ಕಾಲ ಕಳೆದಳು. ಅಲ್ಲದೆ ರಾವಣನ ಕಾಮುಕವಾದ ಮಾತುಗಳನ್ನು ಕೇಳಿಯೂ ಸಹ ಅವನನ್ನು ಕೊಲ್ಲದೆ ಸಹನೆಯಿಂದ ಇದ್ದುದು ನಿನಗೆ 'ರಾವಣಾರಿ' ಎಂಬ ಕೀರ್ತಿ ಬರಲೆಂದು. (ಈ ಅಭಿಪ್ರಾಯವು ಆನಂದರಾಮಾಯಣದಲ್ಲಿ ವ್ಯಕ್ತವಾಗಿದೆ.)

ಶ್ರೀ ಜನಕತನಯೇ! (ಕಲಕಂಠಿ -- ಆದಿ) :-- ಇಂದೊಂದು ಸಂಸ್ಕೃತದಲ್ಲಿರುವ ಕೃತಿ. ಇದರಲ್ಲಿ ತ್ಯಾಗರಾಜರು ಸೀತಾಮಾತೆಯನ್ನು ಕುರಿತು "ಎಲೈ ಜನಕ ತನಯೇ! ನೀನು ಆಶ್ರಿತರ ಕಮಲಾಲಯೆ, ರಘುನಾಥನ ಸತಿ, ಶತಮುಖ ರಾವಣನೆಂಬ ಕಾರ್ಮೋಡವನ್ನು ನಿರ್ನಾಮ ಮಾಡುವುದರಲ್ಲಿ ಸುಂಟರಗಾಳಿಯಂತಿರುವವಳು, ಭಕ್ತರ ಮನಸ್ಸಿನಲ್ಲಿ ಸದಾ ನೆಲೆಸಿರುವವಳು, ಇಂದ್ರನ ಕಿರೀಟದಲ್ಲಿರುವ ವಜ್ರ ವೈಢೂರ್ಯದ ಕಾಂತಿಯಿಂದ ಬೆಳಗುತ್ತಿರುವ ಪಾದಕಮಲಗಳುಳ್ಳವಳು. ಇಂತಹ ನೀನು ಸದಾ ನನ್ನನ್ನು ಕಾಪಾಡು" ಎಂದಿದ್ದಾರೆ.

ದೇಹಿ ತವಪದಭಕ್ತಿಂ, ವೈದೇಹಿ! (ಶಹಾನ -- ಆದಿ) :-- ಇದು ಸಂಸ್ಕೃತ ಸಾಹಿತ್ಯವುಳ್ಳ ಕೃತಿ. ಇದರ ಅಭಿಪ್ರಾಯವು ಹೀಗಿದೆ -- "ಪತಿತಪಾವನೆಯಾದ ವೈದೇಹಿಯೇ! ನಿನ್ನ ಪಾದಕಮಲಗಳಲ್ಲಿ ನನಗೆ ಶಾಶ್ವತವಾದ ಭಕ್ತಿಯನ್ನು ಕೊಡು. ನೀನು ಐಹಿಕ ಮತ್ತು ಆಮುಷ್ಮಿಕ ಫಲವನ್ನು ಕೊಡುವವಳು. ಬ್ರಹ್ಮ ಮತ್ತು ಮನ್ಮಥನ ಜನನಿ, ಸಮುದ್ರೋತ್ಪನ್ನಳು, ಅಗಸ್ತ್ಯ ಋಷಿಯ ಗೀತದಿಂದ ಮುದಿತಳು. ಅಖಿಲಾಂಡ ರೂಪಿಣಿ, ವಿಶ್ವಾಮಿತ್ರನ ಯಾಗ ಸಂರಕ್ಷಣೆ ಮಾಡಿದವನ ರಾಣಿ. ನನ್ನ ಭಾಗ್ಯಕಾರಿಣಿ. ಶತಮುಖ ರಾವಣನ ಮದವನ್ನು ದಮನ ಮಾಡಿದವಳು. ತ್ಯಾಗರಾಜನಾದ ನನ್ನ ಹೃದಯದಲ್ಲಿ ವಾಸಿಸು."

ಶತಮುಖರಾವಣನ ವಿಚಾರವು ವಾಲ್ಮೀಕಿ ರಾಮಾಯಣದಲ್ಲಿ ಬರುವುದಿಲ್ಲ. ಶ್ರೀಮದಾನಂದರಾಮಾಯಣದಲ್ಲಿ ಶ್ರೀರಾಮನು ಲಂಕೆಯಿಂದ ಅಯೋಧ್ಯೆಗೆ ಹಿಂತಿರುಗುವಾಗ ಕುಂಭಕರ್ಣನ ಮೊಮ್ಮಗನಾದ ಕೌಂಡ್ರಕನೆಂಬ ರಾಕ್ಷಸನನ್ನೂ ಶತಮುಖ ರಾವಣನೆಂಬ ರಾಕ್ಷಸನನ್ನೂ ಸಂಹಾರ ಮಾಡಿದಳೆಂದು ಇದೆ.

## ಆಂಜನೇಯ

ವಾಲ್ಮೀಕಿ ರಾಮಾಯಣದಲ್ಲಿ ಆಂಜನೇಯನು ಬ್ರಹ್ಮಚಾರಿಯ ರೂಪವನ್ನು ಧರಿಸಿ ರಾಮಲಕ್ಷ್ಮಣರ ಸಮೀಪಕ್ಕೆ ಬಂದು ಅವರನ್ನು ಯಾರು, ಏನು ಇತ್ಯಾದಿ ವಿಚಾರಿಸುತ್ತಾನೆ. ಅವನ ಮಾತನ್ನು ಕೇಳಿದ ಶ್ರೀರಾಮನು "ಲಕ್ಷ್ಮಣಾ, ಇವನ ಮಾತುಗಳನ್ನು ಕೇಳಿದೆಯಾ. **ಋಕ್**, ಯಜುಸ್, ಸಾಮ ವೇದಗಳನ್ನು ಪೂರ್ಣವಾಗಿ ಅಧ್ಯಯನ ಮಾಡ

ದವ ಹೀಗೆ ಮಾತಾಡಲು ಸಾಧ್ಯವೇ ? ಇವನ ಮಾತುಗಳನ್ನು ಕೇಳಿದರೆ ಇವನು ಪೂರ್ಣವಾಗಿ ವೇದಾಧ್ಯಯನ ಮಾಡಿದವ ಎನ್ನುವುದು ಸ್ಪಷ್ಟವಾಗುತ್ತದೆ. ಮಧುರವಾಗಿ ಕಿವಿಗಿಂಪಾಗುವಂತೆ ಮಾತ್ರವೇ ಅಲ್ಲದೆ ಹೃದಯವನ್ನೂ ಅಪಹರಿಸುವಂತಹ ಮಾತುಗಳನ್ನು ಆಡುತ್ತಾನೆ ನೋಡಿದೆಯಾ! ಇಂಥ ಧೀಮಂತನನ್ನು, ವಿದ್ವಾಂಸನನ್ನು, ಬುದ್ಧಿಶಾಲಿಯನ್ನು ದೂತನನ್ನಾಗಿ ಪಡೆಯುವವನೇ ಧನ್ಯ!" ಎಂದಿದ್ದಾನೆ. ಆಂಜನೇಯನು ಬುದ್ಧಿವಂತರಲ್ಲಿ ಶ್ರೇಷ್ಠ, ಸುಂದರ, ವೀರ, ರಾಮನ ಭಕ್ತಾಗ್ರೇಸರ. ತ್ಯಾಗರಾಜರು 'ಪಾಹಿ ರಾಮದೂತ' (ವಸಂತವರಾಳಿ) ಮತ್ತು 'ಕಲುಗುನಾ ಪದ ನೀರಜ ಸೇವ' (ಪೂರ್ಣಲಲಿತಾ) ಎಂಬ ಎರಡು ಕೃತಿಗಳಲ್ಲಿ ಭಕ್ತನಾದ ಆಂಜನೇಯನ ಮಹಾತ್ಮೆಯನ್ನೂ ವ್ಯಕ್ತಿತ್ವವನ್ನೂ ಕುರಿತು ಹಾಡಿದ್ದಾರೆ. ಆಂಜನೇಯನು ರಾಮದೂತ, ಸಾಗರೋಲ್ಲಂಘನ ಮಾಡಿದವನು, ರಾವಣನ ಸುತನಾದ ಅಕ್ಷಯಕುಮಾರನನ್ನು ಸಂಹರಿಸಿದವನು, ಉದಯಿಸುವ ಸೂರ್ಯನಂತೆ ಕಾಂತಿಯುಳ್ಳವನು, ಕೋಟಿ ಸೂರ್ಯಪ್ರಕಾಶನು. ರಾಮನ ಪಾದಗಳನ್ನು ಕೈಗಳಲ್ಲಿ ಹಿಡಿದವನು, ಕಲಿಯ ಪಾಪಗಳೆಂಬ ಮೋಡಗಳನ್ನು ಚದುರಿಸುವ ಗಂಧವಾಹನು, ಘೋರ ರಾಕ್ಷಸರೆಂಬ ಸಮುದ್ರಕ್ಕೆ ಅಗಸ್ತ್ಯನಂತಿರುವವನು, ಕೃತಕಾರ್ಯನು, ಪಾರಿಜಾತತರುನಿವಾಸನು, ವಾಯುವೇಗ ಉಳ್ಳವನು, ಪತಿತಪಾವನನು ದುಷ್ಟ ಗ್ರಹಗಳನ್ನು ಪಾದಗಳಿಂದಲೇ ನಿಗ್ರಹಿಸುವವನು, ವೇದ ಶಾಸ್ತ್ರಗಳಲ್ಲಿ ನಿಪುಣನು, ವಿಮಲಚಿತ್ತನು, ಕರುಣಾರಸಪರಿಪೂರ್ಣನು, ಮೇರುಪರ್ವತದಂತೆ ಕಾಂತಿಯುತವಾದ ದೇಹವುಳ್ಳವನು, ಪರಮ ಭಾಗವತ ಶ್ರೇಷ್ಠನು ಮತ್ತು ವರದನು. ಆಂಜನೇಯನು ಭಗವಂತನ ದರ್ಶನವನ್ನು ಮಾಡುತ್ತಾ ಬ್ರಹ್ಮಾನಂದವನ್ನು ಪಡೆವ ಭಕ್ತಾಗ್ರೇಸರ. ಶ್ರೀರಾಮನು ಪ್ರತಿದಿನ ಉಷಃಕಾಲದಲ್ಲಿ ಎದ್ದು, ಅಮೃತ ಸ್ನಾನಮಾಡಿ ಆಂಜನೇಯನ ಕೈಯನ್ನು ಹಿಡಿದುಕೊಂಡು, ಶ್ರೀರಂಗೇಶನಿಗೆ ಭೋಗವನ್ನರ್ಪಿಸಿ, ಸೀತಾದೇವಿಯ ಹಸ್ತಗಳಿಂದ ಪ್ರಸಾದವನ್ನು ಸ್ವೀಕರಿಸಿ ನಂತರ, ಆಂಜನೇಯನನ್ನು ಪುರಾಣ ಪಠಣ ಮಾಡೆಂದು ಹೇಳಿ ಅದನ್ನು ಕೇಳುತ್ತಾನೆ. ಈ ದೃಶ್ಯಗಳನ್ನೂ, ಆಂಜನೇಯನು ಮಾಡುವ ಕೈಂಕರ್ಯವನ್ನು ನೋಡುವ ಭಾಗ್ಯವು ತನಗೂ ದೊರಕದೇಕೆಂದು ಆಂಜನೇಯನನ್ನು ಕೇಳುತ್ತಾರೆ.



ಬೆಂಗಳೂರು ನಗರದ ವಿಮಾನ ನಿಲ್ದಾಣದ ಬಳಿಯಲ್ಲಿ 65 ಅಡಿ ಎತ್ತರದ ಮಹಾಶಿವ ಮೂರ್ತಿಯ ವಿಗ್ರಹವನ್ನು ಶೃಂಗೇರಿಯ ಶ್ರೀ ಶ್ರೀ ಭಾರತೀ ತೀರ್ಥ ಶ್ರೀಪಾದಂಗಳು ಮಹಾಶಿವರಾತ್ರಿಯಂದು ಅನಾವರಣಗೊಳಿಸಿದರು.

## ಲಕ್ಷ್ಮಣ

ಸುಮಿತ್ರೆಯ ಹಿರಿಯ ಮಗನು ಲಕ್ಷ್ಮಣ. "ಲಕ್ಷ್ಮಣೋ ಲಕ್ಷ್ಮೀಸಂಪನ್ನಃ" ಎಂದಿದ್ದಾರೆ ವಾಲ್ಮೀಕಿ. ಏಕೆಂದರೆ ರಾಮನು ಹದಿನಾಲ್ಕು ವರ್ಷ ವನವಾಸಮಾಡಿದಾಗ ಎಡಬಿಡದೆ ಅವನೊಡನೆ ಇದ್ದು ಅವನ ಕೈಂಕರ್ಯವನ್ನು ಮಾಡಿದ ಮಹಾನುಭಾವ ಲಕ್ಷ್ಮಣ. ಹದಿನಾಲ್ಕು ವರ್ಷಗಳ ಕಾಲ ಒಬ್ಬನೇ ಎಲ್ಲ ರೀತಿಯ ಸೇವೆಯನ್ನೂ ಮಾಡಿದ. ಹೀಗೆ ರಾಮಸೇವಾಭಾಗ್ಯವನ್ನು ಹೊಂದಿದವನಾದ್ದರಿಂದಲೇ ಕೈಂಕರ್ಯ ಲಕ್ಷ್ಮಿಯನ್ನು ಪಡೆದವನಾದ್ದರಿಂದ ಅವನು ಲಕ್ಷ್ಮೀಸಂಪನ್ನ, ತ್ಯಾಗರಾಜರು 'ಮಿತ್ರಿಭಾಗ್ಯಮೆ' (ಖರಹರಪ್ರಿಯ) ಎಂಬ ಕೃತಿಯಲ್ಲಿ ಲಕ್ಷ್ಮಣನ ಭಾಗ್ಯವೇ ಭಾಗ್ಯ ಎಂದಿದ್ದಾರೆ. ಚಿತ್ರ ರತ್ನಮಯವಾದ ಶೇಷತಲ್ಪದಲ್ಲಿ ಶ್ರೀರಾಮನನ್ನು ತೂಗಿ, ಅವನ ಅವತಾರದ ತತ್ವಾರ್ಥವನ್ನು ತಿಳಿಸುವ ಹಾಡುಗಳನ್ನು ಅಪರೂಪ ರಾಗಗಳಲ್ಲಿ ಹಾಡಿದಾಗ ಶ್ರೀರಾಮನಿಗೆ ಆನಂದವುಂಟಾದುದನ್ನು ನೋಡುವ ಸೌಭಾಗ್ಯದಿಂದ ಪುಳಕಿತನಾದವನು ಲಕ್ಷ್ಮಣ ಎಂದಿದ್ದಾರೆ.

--ಸದ್ಗುರು ತ್ಯಾಗರಾಜರು

ಪುಸ್ತಕದಿಂದ.



# ಸಂತರು-ಸಂಗೀತ

---ಸಿ. ಗೋವಿಂದಾಚಾರ್.

ಸಂಗೀತವು ನಾದಬ್ರಹ್ಮನಾದ ಶ್ರೀಮನ್ನಾರಾಯಣನಿಂದ ಆವಿರ್ಭಾವವಾಗಿರುವ ಅಂಶಗಳಲ್ಲಿ ಒಂದು. ಶ್ರೀರಾಮ ರಾಗರಸಿಕ, ಸಂಗೀತಲೋಲ ಎಂದು ತ್ಯಾಗರಾಜರು ಒಂದು ಕಡೆ ಹೇಳಿರುತ್ತಾರೆ. ಅಯೋಧ್ಯಾಸಿಂಹಾಸನಕ್ಕೆ ಬೇಕಾದ ಅರ್ಹತೆಗಳಲ್ಲಿ ಸಂಗೀತ ಜ್ಞಾನವೂ ಒಂದು. ಶ್ರೀರಾಮ ಇದರಲ್ಲಿ ಉತ್ತೀರ್ಣನಾಗಿದ್ದ ಎಂದು ವಾಲ್ಮೀಕಿ ಮಹರ್ಷಿಗಳು ಹೇಳಿರುತ್ತಾರೆ. ಲವಕುಶರು ಅಯೋಧ್ಯಾಜನರನ್ನು ಸೊಗಸಾದ ಸಂಗೀತದೊಂದಿಗೆ ರಂಜಿಸುತ್ತಿದ್ದರು. ಶ್ರೀಕೃಷ್ಣನ ವೇಣುನಾದ ಶಿಶು, ಪಶುಪಕ್ಷಿಗಳನ್ನು ಸೆಳೆಯುವಂಥಾದ್ದು. ಭಕ್ತರು ಮೈಮರೆತು ಉಚ್ಚಕಂಠದಿಂದ ಭಜನೆಯನ್ನು ಮಾಡಿದಾಗ, ಪಂಢರಾಪುರದ ವಿಠಲನು ಭಕ್ತರ ಮೇಲೆ ಕೃಪಾದೃಷ್ಟಿ ಹರಿಸುವುದರಿಂದ ವಿಠಲನಿಗೆ 'ನಾದಬ್ರಹ್ಮ' ಎಂದು ಹೆಸರಿದೆ.

ಮುಕ್ತಿಮಾರ್ಗ ಸಾಧನಗಳಾದ ನವವಿಧ ಭಕ್ತಿಯಲ್ಲಿ ದಾಸ್ಯಭಾವವನ್ನೊಳಗೊಂಡ ಭಗವನ್ನಾಮ ಸಂಕೀರ್ತನೆಯೂ ಒಂದು. ಇದರ ಜೊತೆಗೆ ಭಜನೆ, ನೃತ್ಯಗಳಿಂದ ಕೂಡಿದ ಸಂಗೀತ ಸೂಕ್ತ ಮಾಧ್ಯಮ ಎಂದು ಪುರಂದರ ದಾಸರು ಸಾರಿದ್ದಾರೆ. ದಾಸರ ಪದಗಳೂ ಈ ರೀತಿಯಲ್ಲೇ ಬೆಳೆದು ಬಂದಿವೆ. ಸಂಗೀತ ಜ್ಞಾನವಿಲ್ಲದವನಿಗೆ ಮುಕ್ತಿ ಇಲ್ಲ. "ಸಂಗೀತಜ್ಞಾನಮು ಭಕ್ತಿ ವಿನಾ ಸನ್ಮಾರ್ಗಮು ಗಲದೆ ಮನಸಾ" ಎಂದು ತ್ಯಾಗರಾಜರು ಭಕ್ತಿಯುತವಾದ ಸಂಗೀತವನ್ನು ಎತ್ತಿ ಹಿಡಿದಿದ್ದಾರೆ. ಸಂಗೀತ ಮಾಧ್ಯಮದಿಂದ ಭಕ್ತಿ ಪಂಥವನ್ನು ಹರಿಸುವಲ್ಲಿ ಸಂತ ಮಹಾನರುಗಳಾದ ಆಳ್ವಾರುಗಳು ಹರಿದಾಸರು ಉತ್ತಮ ನಿದರ್ಶನವಾಗಿರುವುದಲ್ಲದೆ, ಅವರ ಭಕ್ತಿ ಸಂಗೀತದೊಂದಿಗೆ ಬೆರೆತು ಅವರು ಅದರಲ್ಲೇ ಗಾಢವಾಗಿ ಮೈಮರೆತು ಅವರಿಗೆ ಆನಂದ ಭಾಷ್ಪ ಉಂಟಾಗಿ ಮಾತೇ ಹೊರಡದೆ ಧ್ವನಿ ಕ್ಷೀಣಿಸಿರುವ ಅನೇಕ ಉದಾಹರಣೆಗಳಿವೆ. ಸಂಗೀತ ಸಹಿತವಾದ ಭಕ್ತಿಯಿಂದ ಭಗವದನುಭವ ಸಾಧ್ಯ ಎಂಬುದಕ್ಕೆ ಪಾಣಾಳ್ವಾರರೇ ಸಾಕ್ಷಿ.

ಹಾಡುಗಾರಿಕೆ ವಾದ್ಯಗಾರಿಕೆ ನೃತ್ಯ -- ಇವು ಮೂರು ಸೇರಿ ಸಂಗೀತ ಎಂಬ ಮನೋಕಲ್ಪನೆ ಅನಾದಿಕಾಲದಿಂದಲೂ ಬಂದಿರುತ್ತೆ. ಕೀರ್ತನೆ, ಗೀತೆ, ಪದಗಳಿಗಾಗಿಯೇ ಸಂಗೀತ ಜನ್ಮತಾಳಿದೆ ಎಂದು ಹೇಳಿದರೆ ತಪ್ಪಾಗಲಾರದು. ವೇದೋಪನಿಷತ್ತುಗಳಲ್ಲಿ, ಪುರಾಣಗಳಲ್ಲಿ ಸಂಗೀತ ಶಾಸ್ತ್ರದ ಉಲ್ಲೇಖಗಳಿವೆ. ಭಾರತೀಯ ಸಂಸ್ಕೃತಿಯಲ್ಲಿ ಸಂಗೀತ ನೃತ್ಯಕಲೆ ಚೆನ್ನಾಗಿ ಬೆರೆತು ಬೆಳೆದು ಬಂದಿದೆ. ಇದರಲ್ಲಿ ದೊರಕುವ ಪ್ರಾಚೀನ ಸಾಹಿತ್ಯಗಳು -- ಶಿಲಪ್ಪದಿಕಾರಂ, ಪರಿಪಾಡು-- ಆಳ್ವಾರುಗಳ ದಿವ್ಯಪ್ರಬಂಧ ಹಾಗೂ ನಾಯನ್ಮಾರುಗಳ ತೇವಾರಂ -- ಇವು ಪುರಾತನ ಸಂಗೀತ ಶಾಸ್ತ್ರದ ತಿರುಳೇ ಆಗಿವೆ. ಅಂದರೆ ಭಕ್ತಿ ಕಾವ್ಯಗಳು ಸಂಗೀತವನ್ನು ಉಪಯೋಗಿಸಿಕೊಂಡಿವೆ. ಕೀರ್ತನ ಮಾರ್ಗಿಗಳಾದ ಆಳ್ವಾರುಗಳ ದಿವ್ಯನಾಮ ಸಂಕೀರ್ತನೆಯನ್ನು ಇಂದಿನ ಲಲಿತಸಂಗೀತಕ್ಕೆ ಹೋಲಿಸಬಹುದು. ಇವರದು ಮನೋಧರ್ಮ ಸಂಗೀತ. ಅಂದರೆ ಭಗವಂತನನ್ನು ನೋಡಿದೊಡನೆಯೇ ಕೀರ್ತನೆಗಳನ್ನು ರಚಿಸಿ ಹಾಡಿ ಭಕ್ತಿಯ ಭರದಲ್ಲಿ ಮೈಮರೆಯುವುದು. ಭಕ್ತಿ ಪಂಥವನ್ನು ಸಂಗೀತದ ತಳಹದಿಯ ಮೇಲೆ ಬೆಳೆಸಿ ಕೀರ್ತನೆ ಹಾಡಿರುವ -- ಕೀರ್ತಿ ಆಳ್ವಾರರ ಪೈಕಿ ಪಾಣರಿಗೆ ಸಲ್ಲುವುದು. ಸಂಗೀತ ಇವರಿಗೆ ರಕ್ತಗತವಾಗಿ ಬಂದಿರುತ್ತೆ. ಪಾಣರು ಎಂಬ ಕುಲದವರಿಗೆ ಸಂಗೀತವೇ ಕಸುಬು. ಚಿಕ್ಕಂದಿನಿಂದಲೇ ಪಾಣರಿಗೆ ಭಜನೆಯಲ್ಲಿ ತುಂಬಾ ಆಸಕ್ತಿ ಇತ್ತು. ಪೆರಿಯಾಳ್ ಎಂಬ ತಂತಿವಾದ್ಯವನ್ನು ಜೋತು ಹಾಕಿಕೊಂಡು ಎಲ್ಲರನ್ನು ರಂಜಿಸುತ್ತಿದ್ದರು. ಸಂಗೀತದೊಂದಿಗೆ ಭಗವಂತನ ಗುಣಾನುಭವದಲ್ಲೇ ಮುಳುಗಿ ಮೈಮರೆತ್ತಿದ್ದ ಪಾಣರಿಗೆ ಲೋಕಸಾರಂಗಮುನಿ ಕೂಗಿದ್ದು ಕೇಳಿಸಲೇ ಇಲ್ಲ. ಈ ಪ್ರಸಂಗ ಚರಿತ್ರೆಯಲ್ಲಿ ಶಾಶ್ವತವಾಗಿ ಉಳಿದು ಪಾಣರು ಪಾಣಾಳ್ವಾರರಾದರು. ನಮ್ಮಾಳ್ವಾರರು ಸೊಗಸಾದ ಸಂಗೀತದೊಂದಿಗೆ ಪಾಶುರಗಳನ್ನು ಹಾಡುತ್ತಿದ್ದರು. ಸಂತವನಿತೆಯರ ಪೈಕಿ ಆಂಡಾಳ್ ಪ್ರಥಮ ಕವಯಿತ್ರಿ ಹಾಗೂ ಸಂಗೀತಗಾರಳು. ತಿರುಪ್ಪಾವೈ ಹಾಗೂ ನಾಚ್ಚಿಯಾರ್ ತಿರುಮೊಳಿಯನ್ನು ಸೊಗಸಾಗಿ ಹಾಡಿ ಭಗವದನುಭವ ಪಡೆದ ಸಾಹಸಮಯಿ ಇವಳು. ಕಾರ್ತಿಕೈ ಹಬ್ಬದಂದು ಕಲಿಯನರು ತಾವೇ ರಚಿಸಿದ 'ತಿರುನೆಡುಂದಾಂಡಹಂ' ಕೃತಿಯನ್ನು ಸಂಗೀತ ಹಾಗು ನೃತ್ಯಗಳೊಂದಿಗೆ ಭಗವಂತನೆಡೆಗೆ ಸಮರ್ಪಿಸುತ್ತಿದ್ದರು. ನಾಥಮುನಿಗಳಂಥಾ ಕೆಲವು ಸಂತರು ಹಿರಿಯಸಂತರ ಕೃತಿಗಳನ್ನು ಆಧಾರವಾಗಿಟ್ಟುಕೊಂಡು ಕೃತಿಗಳನ್ನು ರಚಿಸಿ ಹಾಡುತ್ತಿದ್ದರು. ಇದಕ್ಕೆ ಕಲ್ಪಿತ ಸಂಗೀತ ಎಂದು ಹೆಸರು. ರಾಗ ತಾಳ ಸ್ವರಗಳ ಪ್ರಾಧಾನ್ಯವಾದ ಲೌಕಿಕ ಸಂಗೀತ ಗಾನ ಮಾರ್ಗ ಎಂದು ಬೆಳೆದು ಬಂದಿದೆ. ಪುರಾತನ ಸಂಗೀತದಲ್ಲಿ ಇಂದಿನ ಲೌಕಿಕ ಸಂಗೀತದಲ್ಲಿ ಕಂಡುಬರುವ ಸಪ್ತಸ್ವರಪದ್ಧತಿ ಅಥವ ಮೇಳಕರ್ತ ಪದ್ಧತಿಯಾಗಲಿ ಕಾಣಸಿಗುವುದಿಲ್ಲ. ವೇದಘೋಷವೇ ಅತ್ಯಂತ ಪುರಾತನ ಸಂಗೀತಸ್ತುತಿ. ಯಾವುದೇ ಹಾಡಾಗಲಿ ಕೀರ್ತನೆಯಾಗಲಿ ಸಸ್ವರ ವೇದಮಂತ್ರದಂತೆ ಹಾಡುವುದೇ ಅಂದಿನ ಸಂಪ್ರದಾಯವಾಗಿತ್ತು. ಸುಪ್ರಭಾತವಾಗಲಿ, ದಿವ್ಯ ಪ್ರಬಂಧವಾಗಲಿ, ನಾಯನ್ಮಾರರ ತೇವಾರಗಳಾಗಲಿ ಅಥವಾ ಯಾವುದೇ ಸಂಗೀತವಾಗಲಿ ೨ ಅಥವಾ ೩ ಸ್ವರಗಳ ಆಧಾರಿತವಾದ ಪಣಿರಾಗ ಪದ್ಧತಿಯನ್ನ ಅವಲಂಬಿಸಿತ್ತು. ಪಣ್ ಎಂಬುದು ಅತ್ಯಂತ ಪ್ರಾಚೀನವಾದರಾಗ. ಕ್ರಮೇಣ ಇದರಲ್ಲಿ ಸೇರ್ಪಡೆಯೊಂದಿಗೆ ಬದಲಾವಣೆ ಕಂಡುಬಂದಿತು. ನಾಟ, ತಿರಂ, ಕುರುಂಜಿ, ಪಂಚಮ, ಗಾಂಧಾರ, ಸೆಂಸುರುಟಿ ಮುಂತಾದ ರಾಗಗಳು ಸೇರಿ ಒಟ್ಟು ೨೪ ಪಣ್ ರಾಗಗಳನ್ನು ಗುರುತಿಸಲಾಯಿತು. ಇವುಗಳನ್ನು ಪಹಲ್ ಪಣ್, ಇರವುಪಣ್ ಹಾಗೂ ಯಾವಾಗ ಬೇಕಾದರು ಹಾಡುವ ಪೊದುಪಣ್ ಎಂದು ವಿಂಗಡಿಸಲಾಯಿತು. ಹಾಡು ಕೀರ್ತನೆಗಳು ನಾಟಪಣ್ ರಾಗದೊಂದಿಗೆ ಆರಂಭವಾಗುತ್ತಿತ್ತು.

ಅಷ್ಟೋತ್ತರ ಅರ್ಚನೆ ಏಕಸ್ವರದಿಂದ ಕೂಡಿರುತ್ತೆ. ಇದಕ್ಕೆ ಅರ್ಚಕಗಾನ ಎಂದು ಹೆಸರು. ತಿರುವಹೀಂದ್ರಪುರ, ಕುಂಭಕೋಣದ ಎಲ್ಲಾ ದಿವ್ಯ ಕ್ಷೇತ್ರಗಳಲ್ಲಿ ಅರ್ಚಕರು ಸೊಗಸಾದ ರಾಗದಲ್ಲಿ ಅರ್ಚನೆ ಮಾಡುವುದನ್ನು ಇಂದಿಗೂ ನೋಡಬಹುದು. ೨--೩ ಸ್ವರ ಸಂಯೋಜನೆಯ ಸುಪ್ರಭಾತಗಳು ಕ್ರಮೇಣ ಭೂಪಾಳಿ, ಮಲಯಮಾರುತ ಮುಂತಾದ ಉದಯರಾಗಗಳಿಂದ ನೂತನ ಮಾರ್ಗ ಹಿಡಿದವು. ಭಕ್ತಕವಿ ಸಂತರು ಸಂಗೀತಕ್ಕೆ ಹೊಸ ರೂಪು ರೇಷೆಗಳನ್ನು ಕೊಟ್ಟರು. ರಾಗ ಸಂಯೋಜನೆಯಲ್ಲಿ ಹೊಸ ಅಧ್ಯಾಯವನ್ನು ತೆರೆದವರು ಪುರಂದರದಾಸರು. ಕಲಿಯುವವರ ದೃಷ್ಟಿಯನ್ನೇ ಮನಸಿನಲ್ಲಿಟ್ಟುಕೊಂಡು ಪ್ರಥಮವಾಗಿ ಖರಹರಪ್ರಿಯ ರಾಗವನ್ನು ಪ್ರಯೋಗಿಸಿದರು. ಇದು ಕ್ಲಿಷ್ಟವೆಂದು ತಿಳಿದಾಗ ಅತಿಸುಲಭವಾದ ಮಾಯಾಮಾಳವ ಗೌಳವನ್ನು ಸಂಗೀತ ಶಾಸ್ತ್ರದ ಕಲಿಕೆಯ ಆದಿರಾಗವನ್ನಾಗಿ ಉಪಯೋಗಿಸಿ ಯಶಸ್ವಿಯಾದರು. ಇಲ್ಲಿಂದಲೇ ಕರ್ನಾಟಕ ಸಂಗೀತ ಉಗಮವಾಗಿ ದಾಸರು 'ಕರ್ನಾಟಕ ಸಂಗೀತ ಪಿತಾಮಹ' ಎಂದು ಖ್ಯಾತಿ ಪಡೆದರು. ಕನ್ನಡಿಯ ಪ್ರತಿಬಿಂಬದಂತೆ ಉತ್ತರ ಭಾರತದ ಸಂತರು 'ಬಿಲಾವಲ್' ಎಂಬ ರಾಗವನ್ನು ಆರಂಭರಾಗವಾಗಿ

